# ಅಗ್ನಿ ಅಂಕುರ

ನಮ್ಮ ನಿಮ್ಮೆಲ್ಲರ ಮೆಚ್ಚಿನ ಪತ್ರಿಕೆ

ಸಂಪುಟ : ೧೩ ಸಂಚಿಕೆ : ೭ ಜುಲೈ ೨೦೦೯ ಬೆಲೆ : ೧೦ ರೂ/-




## ಗಂಡಸತ್ತ ಮೇಲೆ ಶ್ಯಾಣೆ ಆಗುತ್ತಿರುವ ಹೈ.ಕ.ಜನತೆ ?

## ಸ್ವರ್ಗವನ್ನು ಸೃಷ್ಟಿಸಿದವರು ಮನೋರೋಗಿಗಳು



## ಖಮರುಲ್ ಬುದ್ಧಿಗೆ ಗ್ರಹಣ !

## ಕ್ಯಾನ್ಸರ್‌ಗೆ ಗೋಗಿ ಗ್ರಾಮ ಬಲಿ ?

## ದಾಸ ಆಗುವುದು ಸರಿಯಲ್ಲ







## ನಾಡಿನ ಸಮಸ್ತ ಜನತೆಗೆಲ್ಲ
## ಗಣೇಶ ಹಬ್ಬದ ಶುಭಾಶಯಗಳು



### ಸಿದ್ದಣ್ಣಗೌಡ ಬಿ.ಪಾಟೀಲ

ಶ್ರೀ.ವೀರಭದ್ರೇಶ್ವರ ಮೆಡಿಕಲ್ ಮತ್ತು ಜನರಲ್ ಸ್ಟೋರ್

ಶಿರವಾಳ ತಾ : ಶಹಾಪುರ

---

ಪ್ರೀತಿಯಿರುವೆಡೆ ದರ್ಪಕ್ಕೆ ಸ್ಥಾನವಿರುವುದಿಲ್ಲ
ದರ್ಪವಿರುವೆಡೆ ಪ್ರೀತಿಗೆ ಸ್ಥಾನವಿರುವುದಿಲ್ಲ - ಕಾರ್ಲ್‌ಜಂಗ್

# ಅಗ್ನಿ ಅಂಕುರ

ನಮ್ಮ ನಿಮ್ಮೆಲ್ಲರ ಪತ್ರಿಕೆ

ಸಂಪುಟ : ೧೩ ಸಂಚಿಕೆ : ೭ ಜುಲೈ - ೨೦೦೯ ಬೆಲೆ : ೧೦ ರೂ/.

ಸಂಪಾದಕರು

**ವಿಶ್ವಾರಾಧ್ಯ ಸತ್ಯಂಪೇಟೆ**



ಪ್ರಕಾಶನ

ಅಗ್ನಿ ಅಂಕುರ ಪತ್ರಿಕೆ ಪ್ರಕಾಶನ ಬಸವ ಮಾರ್ಗ ಸಿ.ಬಿ.ಕಾಲನಿ

ಶಹಾಪುರ - ೫೮೫ ೨೨೩ ಕಲಬುರ್ಗಿ ಜಿಲ್ಲೆ

ಸಂಚಾರ : 9480161315 e-mail : satyampet.2007@rediffmail.com

## ಹೊಸ ವಿನ್ಯಾಸದ ಅಗ್ನಿ ಅಂಕುರದಲ್ಲಿ ಲೇಖನಗಳೆಲ್ಲ ಚೆನ್ನಾಗಿವೆ.

ಪ್ರೀತಿಯ ವಿಶ್ವಾರಾಧ್ಯ ಸತ್ಯಂಪೇಟೆ
ಅವರಿಗೆ ನಮಸ್ಕಾರಗಳು,

ಹೊಸ ವಿನ್ಯಾಸದ ಅಗ್ನಿ ಅಂಕುರ ನೋಡಿದೆ. ಈ ಮುಂಚಿನ ಸಂಚಿಕೆಗಳಿದ್ದರೆ ಕಳಿಸಿರಿ.

ಲೇಖನಗಳೆಲ್ಲ ಚೆನ್ನಾಗಿವೆ. ನಿಮಗೆ ವಂದನೆಗಳು.

೦ ಚಂದ್ರಶೇಖರ ಪಾಟೀಲ ಮಾಜಿ ಕ.ಸಾ.ಪ.ಅಧ್ಯಕ್ಷರು

ಅಗ್ನಿ ಅಂಕುರ

ಬ್ರಾಹ್ಮಣ್ಯಕ್ಕೆ ಜೋತುಬಿದ್ದ ಮಠಾಧಿಪತಿಗಳು

ನಾಗಮಾರಪಳ್ಳಿ ಗಟಾರಕ್ಕೆ ಬಿದ್ದದ್ದೇಕೆ ?

ಧರ್ಮ ಧರ್ಮ ಎಂದು ಬಡಬಡಿಸುವವರೆಲ್ಲ ಹುಂಬರು !

ನಿನ್ನ ಜೀವನ ನಿನ್ನದು

ಸುದ್ದಿಯಲ್ಲೂ ನೀ ಹಾಡುವಿಯಲ್ಲೋ

## ಪತ್ರಿಕೆಗೆ ಸಂಪೂರ್ಣ ಸಹಕಾರವಿದೆ

ಪ್ರಿಯ ವಿಶ್ವಾರಾಧ್ಯ

ನಮ್ಮ ಭಾಗದ ವೈಚಾರಿಕ ಪತ್ರಿಕೆಗಳಲ್ಲಿ ಎತ್ತಿ ಹೇಳಬಹುದಾದ ಮೊದಲ ಪತ್ರಿಕೆ ಅಗ್ನಿ ಅಂಕುರ. ಇಷ್ಟು ಶತಮಾನಗಳ ಕಾಲ ನಮ್ಮ ಬುದ್ಧಿ- ಸಾಮರ್ಥವನ್ನು ಕುಗ್ಗಿಸಿ ಅದರ ಮೇಲೆ ಸವಾರಿ ಮಾಡುತ್ತಿದ್ದ , ಮೂಢನಂಬಿಕೆಗಳನ್ನು ಹಬ್ಬಿಸುತ್ತಿದ್ದ ಸ್ವಾಮಿ - ಮಹಾಸ್ವಾಮಿಗಳೆಂಬ ಖೂಳರ ಇಬ್ಬಗೆಯನ್ನು ಮೊದಲು ಬಿಡಿಸಿಟ್ಟಿದೆ. ಜೊತೆಗೆ ನಮ್ಮನ್ನೆಲ್ಲ ವಿವೇಕಾನಂದ, ಬಸವಣ್ಣ, ಓಶೋ ಎಂಬ ಚಿಂತನಕಾರರ ಚಿಂತನೆಗಳ ಮೂಲಕ ಚಿಂತನೆಗೆ ಹಚ್ಚಿದೆ.

ಕಳೆದ ಸಲದ ತಮ್ಮ ಸಂಪಾದಕೀಯ ಬ್ರಾಹ್ಮಣ್ಯಕ್ಕೆ ಜೋತು ಬಿದ್ದ ಲಿಂಗಾಯತ ಮಠಾಧಿಪತಿಗಳು ನಮ್ಮ ಇಂದಿನ ಸಮಾಜದ ಮಠಾಧಿಪತಿಗಳೆಲ್ಲ ಆತ್ಮಾವಲೋಕನ ಮಾಡಿಕೊಳ್ಳುವಂತೆ ಇತ್ತು. ಆದರೆ ಮಠಾಧೀಶರಿಗೆ ಆತ್ಮವೇ ಇಲ್ಲದ ಮೇಲೆ ಆತ್ಮಾವಲೋಕ ಮಾಡಿಕೊಳ್ಳುವ ಪ್ರಸಂಗವೆ ಇದಿರಾಗುವುದಿಲ್ಲವಲ್ಲ ಎಂದು ವ್ಯಥೆಯಾಯಿತು.

ಆದ್ದರಿಂದ ಪ್ರಜ್ಞಾವಂತರಾದ ಜನಗಳಾದರೂ ಇನ್ನೂ ಮುಂದಾದರೂ ಇಂಥ ಬೂಟಾಟಿಕೆಯ ಜನಗಳ ಹಿಂದೆ ದುಂಬಾಲು ಬೀಳುವುದನ್ನು ತಡೆಯಬೇಕು. ಈ ಜಾಗೃತಿಯನ್ನು ಅಗ್ನಿ ಅಂಕುರ ನಡೆಸಿದೆ. ಇದಕ್ಕೆ ನಮ್ಮ ಸಂಪೂರ್ಣ ಸಹಕಾರವಿದೆ.

೦ ಮಲ್ಲಣ್ಣ ಪಟವಾರಿ ಗುಲಬರ್ಗಾ

## ನಮ್ಮ ಪತ್ರಿಕೆಯ ಕಾನೂನು ಸಲಹೆಗಾರರು

ಸರ್ವಶ್ರೀ ಗೋಪಾಲ ಎಸ್. , ಟಿ.ನಾಗೇಂದ್ರ ಸುರಪುರ , ರಮೇಶ ಸೇಡಂಕರ, ಹೊನ್ನಾರೆಡ್ಡಿ ಹಾಗೂ ವಿಶ್ವನಾಥ ಮುಂಡಾಸ, ಸಂತೋಷ ಸತ್ಯಂಪೇಟೆ,ಬಸ್ಸನಗೌಡ ದೇಸಾಯಿ ದೇವದುರ್ಗ, ಹೇಮರಡ್ಡಿ ಕೊಂಗಂಡಿ, ರವಿ ಅಳುಂಡಿ ದೇವದುರ್ಗ , ವೆಂಕಟರಡ್ಡಿ ಬೋನ್ಹಾಳ .......



# ಏತಕ್ಕೆ ಮಳೆ ಹೋದವೋ... ?

ಸಂಪಾದಕೀಯ

ಹೈದ್ರಾಬಾದ್ ಕರ್ನಾಟಕದ ಜನತೆ ನಿಜಕ್ಕೂ ಇದೀಗ ಕಂಗಾಲಾಗಿದ್ದಾರೆ. ಸರಕಾರ ನಡೆಸುವ ಬೇಜವ್ದಾರಿ ರಾಜಕಾರಣಿಗಳು ಹೈ.ಕ.ವನ್ನು ಒಂದು ರೀತಿಯಲ್ಲಿ ನಿರ್ಲಕ್ಷಿಸುತ್ತ ಬಂದರೆ ಪ್ರಕೃತಿ ಕೂಡ ಮತ್ತೊಂದು ರೀತಿಯಲ್ಲಿ ಮುನಿಸು ತೋರುತ್ತಿದ್ದಾಳೆ. ಇಡೀ ಕರ್ನಾಟಕದಾದ್ಯಂತ ಎಲ್ಲಾ ಕಡೆ ಮುಂಗಾರು ಮಳೆ ತನ್ನ ರುದ್ರ ನೃತ್ಯವನ್ನು ಪ್ರದರ್ಶಿಸಿದ್ದರೆ ಹೈ.ಕ. ಪ್ರದೇಶದತ್ತ ಅದು ತಪ್ಪಿಯೂ ಕೂಡ ತನ್ನ ಮುಖವನ್ನು ತೋರಿಸಿಲ್ಲ. ಮೊದಲೆ ಬಿಸಿಲಿನಿಂದ ಕಂಗಾಲಾಗಿದ್ದ ಜನತೆ ಜೂನ್ ಸಮೀಪಿಸುತ್ತಿದ್ದಂತೆ ಮಳೆ ಬರುತ್ತದೇನೋ ಎಂದು ಮುಗಿಲಿನತ್ತ ಕಣ್ಣು ಹಾಯಿಸಿದರು. ಮೋಡಗಳೇನೋ ದಟ್ಟವಾಗಿದ್ದವು. ಆದರೆ ಅವು ಆಸೆಯನ್ನು ಹುಟ್ಟಿಸಿ ಮುಂದೆ ಸಾಗಿ ಹೋದವು. ಹೊರತಾಗಿ ನಾಲ್ಕು ಹನಿಯನ್ನು ಸುರಿಸಲಿಲ್ಲ.

ಇದಕ್ಕೆ ಬಹು ಮುಖ್ಯವಾದ ಕಾರಣವನ್ನು ನಾವೆಲ್ಲರೂ ಮರೆಯುತ್ತಿದ್ದೇವೆ. ಮೋಡವನ್ನು ಸೆಳೆಯುವುದಕ್ಕೆ ಮುಖ್ಯವಾಗಿ ಬೇಕಾದ ಹಸಿರು ನಮ್ಮ ನಾಡಿನಿಂದ ಮರೆಯಾಗಿದೆ. ದಿನ ನಿತ್ಯ ಸಹಸ್ರಾರು ಮರಗಳನ್ನು ಕಡಿಯುತ್ತಾ ಹೊರಟಿದ್ದೇವೆಯೆ ಹೊರತು, ಒಂದಾನೊಂದು ಸಣ್ಣ ಸಸಿಯನ್ನೂ ನೆಡುವ ಗೋಜಿಗೆ ಹೋಗುವುದಿಲ್ಲ. ನಮ್ಮ ಸುತ್ತ ಮುತ್ತ ತಂತಾನೆ ಬೆಳೆದು ನಿಂತ ಪ್ರಕೃತಿ ನಿರ್ಮಿತ ಗುಡ್ಡಗಳನ್ನು ಕಲ್ಲಿನ , ಗ್ರಾನೇಟ್ ಆಸೆಗಾಗಿ ಒಂದೆ ಸಮ ಬಗಿಯುತ್ತಿದ್ದೇವೆ. ನೆಲದ ಒಡಲನ್ನಂತೂ ಇಂಚಿಂಚೂ ಬಿಡದೆ ನುಂಗುತ್ತಿದ್ದೇವೆ.

ಹಳ್ಳಗಳಲ್ಲಿ ಈ ಹಿಂದೆ ಸಾಂದ್ರವಾಗಿ ಹರಿಯುತ್ತಿದ್ದ ಉಸುಕು ಬರಿದಾಗಿದೆ. ಭೂಮಿ ಒಡಲಿನೊಂದಿಗಂತೂ ಕ್ಷಣ ಕ್ಷಣವೂ ನಾವೆಲ್ಲ ಸೇರಿ ಹಾದರ ನಡೆಸಿದ್ದೇವೆ. ಆದರೂ ಆ ಪ್ರಕೃತಿ ವರಕೊಡಬೇಕೆಂದು ಕಪ್ಪೆ ಮದುವೆ ಮಾಡಿಸುವುದು, ಕತ್ತೆ ಪೂಜೆ ಮಾಡಿಸುವುದು, ಸಪ್ತ ಭಜನೆ ಹೆಸರಿನಲ್ಲಿ ಶಬ್ಧ ಮಾಲೀನ್ಯ ಉಂಟು ಮಾಡುವುದು ಎಷ್ಟು ಸರಿ ?

ಹಗಲು - ರಾತ್ರಿ ಸಾಕಾಗದೆ ಪ್ರಕೃತಿಯ ಒಡಲನ್ನೆಲ ಬಗೀದು ಮುಂಜಾನೆ ಏಳುತ್ತಲೆ ಮಡಿಯಿಂದ ದೇವರಿಗೆ ನೀರಿನ ನೈವೇದ್ಯ ನೀಡುವುದಾಗಲಿ , ದಿಂಡಿರುಳು ಉರುಳಿ ಅವಳ ಕೃಪಾ ಕಟಾಕ್ಷ ಪಡೆಯುತ್ತೇನೆ ಹೊರಡುವವರೆಲ್ಲ ಪಾಖಂಡಿಗಳು.

ಇವರೆಲ್ಲ ದೇವರ ಹೆಸರಿನ ಮೇಲೆ ಜನಸಾಮಾನ್ಯರಲ್ಲಿ ಭಕ್ತಭಾವಗಳನ್ನು ಉಂಟು ಮಾಡುತ್ತ ಅವರ ಜೇಬಿಗೆ ಕೈಹಾಕುವ ಕಳ್ಳ ಕೊರಮರು. ಈ ಬಗ್ಗೆ ಜನ ಎಚ್ಚರವಹಿಸಬೇಕು. ಮಳೆ ಬರದೆ ಇರುವುದಕ್ಕೆ ಇರುವ ಮುಖ್ಯ ಕಾರಣಗಳನ್ನು ವೈಜ್ಞಾನಿಕವಾಗಿ ತಿಳಿದುಕೊಳ್ಳಬೇಕು.

# ಖಮರುಲ್ ಇಸ್ಲಾಂ ಬಿಟ್ಟ ಓಳು......



ನಂಬಿಕೆಗಳ ಹೆಸರಿನಲ್ಲಿ ನಮ್ಮ ಭಾರತದ ತುಂಬೆಲ್ಲ ಬರೀ ಮೂಢನಂಬಿಕೆಗಳನ್ನು ಯಥೇಚ್ಛವಾಗಿ ಪೋಷಿಸಿಕೊಂಡು ಬರಲಾಗುತ್ತಿದೆ. ಇದಕ್ಕೆ ಮುಖ್ಯ ಕಾರಣ ನಮ್ಮಲ್ಲಿ ವೈಚಾರಿಕ - ವೈಜ್ಞಾನಿಕ ಮನೋಭಾವ ಬೆಳೆಸದೆ ಇರುವುದು ಕಾರಣವಾಗಿದೆ. ನಮ್ಮ ದೇಶದ ಸಂಸ್ಕೃತಿ ಅತ್ಯಂತ ಪುರಾತನವಾದುದು , ಪವಿತ್ರವಾದುದು ಎಂದು ಹೇಳುವ ಮಾತುಗಳಲ್ಲಿಯೇ ಮೌಢ್ಯದ ಬೀಜಗಳಿವೆ. ಮೇಲ್ನೋಟಕ್ಕೆ ಆಧ್ಯಾತ್ಮಿಕತೆ ಎಂದು ಕಾಣಿಸಿದ ಮಾತುಗಳ ತುಂಬೆಲ್ಲ ಮುಂಖಾನು ಮುಂಖವಾಗಿ ಮೌಢ್ಯದ ಆಚರಣೆಗಳನ್ನು ತುಂಬಲಾಗಿದೆ. ಈ ಮೌಢ್ಯದ ಆಚರಣೆಗಳೆ ಆಧ್ಯಾತ್ಮಿಕತೆ. ಇವನ್ನು ಪಾಲಿಸಿಕೊಂಡು ಬರದವನು ಆಸ್ತಿಕ ಎಂದು ಸಾರಿಕೊಂಡು ಬರಲಾಗಿದೆ. ಈ ಅರ್ಬುದ ರೋಗ (ಮೌಢ್ಯ)ವನ್ನು ಒಂದು ಜನಾಂಗದಿಂದ ಮತ್ತೊಂದು ಜನಾಂಗಕ್ಕೆ ಸಲೀಸಾಗಿ ಹಬ್ಬಿಸುವವನೆ ಪುರೋಹಿತ. ಆತ ಮೌಲ್ವಿ, ಪಾದ್ರಿ, ಪೂಜಾರಿ, ಸ್ವಾಮಿ, ಸಾಧು ಯಾರಾದರೂ ಆಗಿರಬಹುದು.

ಧಾರ್ಮಿಕ ಉಡುಗೆಗಳಾದ ಕಾವಿ, ಹಸಿರು, ಬಿಳಿಯ ಬಣ್ಣದ ಬಟ್ಟೆಗಳನ್ನು ಉಟ್ಟ ಘಟಿಂಗನೂ ಈ ನಾಡಿನಲ್ಲಿ ಗೌರವವನ್ನು ಪಡೆಯುತ್ತಾನೆ. ಈ ಬಟ್ಟೆಗಳನ್ನು ಧರಿಸಲು ಯಾವುದೆ ಪದವಿ, ಓದು ಜ್ಞಾನದ ಅವಶ್ಯಕತೆ ಇಲ್ಲವೆ ಇಲ್ಲ. ಚಾಲಾಕಿತನವೊಂದಿದ್ದರೆ ಸಾಕು, ಎಂಥವನೂ ಈ ಕ್ಷೇತ್ರದಲ್ಲಿ ಮಿಂಚಬಲ್ಲ. ಈ ಮೂಲಕ ದುಡ್ಡು , ವರ್ಚಸ್ಸು, ತಪಶಕ್ತಿ ಎಲ್ಲವನ್ನೂ ಪಡೆಯಬಲ್ಲ.

ಈ ಮೇಲಿನ ಎಲ್ಲಾ ಮಾತುಗಳನ್ನು ನಿಮ್ಮ ಮುಂದೆ ಹೇಳುವ ಉದ್ದೇಶವಿಷ್ಟೆ ; ತೀರಾ ಇತ್ತೀಚೆಗೆ ನಡೆದ ಸೂರ್ಯ ಗ್ರಹಣ ಸಂದರ್ಭದಲ್ಲಿ ಗುಲಬರ್ಗಾದ ಮೋಮಿನಪುರ ಪ್ರದೇಶದಲ್ಲಿ ಅಂಗವೈಕಲ್ಯ ಹೊಂದಿದ ಮಕ್ಕಳನ್ನು ತಿಪ್ಪೆಯಲ್ಲಿ ಹೂಳಿಟ್ಟ ಅಮಾನವೀಯ ಘಟನೆ ನಡೆದಿದೆ. ಗ್ರಹಣ ಸಂದರ್ಭದಲ್ಲಿ ಮಕ್ಕಳನ್ನು ತಿಪ್ಪೆಯಲ್ಲಿ ಹೂಳಿಟ್ಟ ಮಾತ್ರಕ್ಕೆ ಆ ಮಕ್ಕಳ ಅಂಗವೈಕಲ್ಯ ಸರಿಹೋಗುತ್ತವೆ ಎಂಬುದು ಎಷ್ಟು ಮೂರ್ಖತನ ಎಂಬುದು ಮೇಲ್ನೋಟಕ್ಕೆ ಸಾಬೀತಾಗುವ ಮಾತು.

ಆದರೂ ಇಂಥ ಘಟಿಂಗ ಮುಲ್ಲಾಗಳ, ಪೂಜಾರಿಗಳ ಹಿಂದೆ ಕಮರುಲ್ಲಾ ಇಸ್ಲಾಂ ನಂಥ ಠಕ್ಕ ರಾಜಕಾರಣಿಯೂ ಇರುತ್ತಾನೆ. ವಿಧಾನಸೌಧದ ಕಲಾಪಗಳಲ್ಲಿ ಈ ಅಮಾನವೀಯ ಘಟನೆ ನಡೆಯುತ್ತಿದ್ದರೆ ಖಮರುಲ್ಲಾ ಅದ್ಯಾವ ಕಾರಣಕ್ಕೋ ಇದನ್ನು ಸಮರ್ಥಿಸುತ್ತಾನೆ. ತಾನೇ ಖುದ್ದಾಗಿ ಇದನ್ನು ನೋಡಿದ್ದಾಗಿಯೂ, ಇದರಿಂದ ನಾಲ್ಕಾರು ಮಕ್ಕಳಿಗೆ ರೋಗವಾಸಿಯಾಗಿರುವುದೆಂತಲೂ ಓಳು ಬಿಡುತ್ತಾನೆ.

ಖಮರುಲ್ಲ ಇಸ್ಲಾಂನಂಥ ಅರ್ಧಬುದ್ದಿ ಜನಪ್ರತಿನಿಧಿಗಳಿರುವ ಈ ದೇಶದಲ್ಲಿ ಮೌಢ್ಯದ ಇಂಥ ಆಚರಣೆಗಳೆ ಸಂವಿಧಾನಿಕ ಪದ್ಧತಿಗಳಾಗಿ ರೂಪುಗೊಂಡರೆ ಯಾರೂ ಆಶ್ಚರ್ಯಪಡಬೇಕಾಗಿಲ್ಲ.

೦ ವಿಶ್ವಾರಾಧ್ಯ ಸತ್ಯಂಪೇಟೆ



# ಗಂಡ ಸತ್ತ ಮೇಲೆ ಶ್ಯಾಣಾ ಆಗುತ್ತಿರುವ ಹೈದ್ರಾಬಾದ ಕರ್ನಾಟಕದ ಜನತೆ ?

ಗಂಡ ಸತ್ತ ಮೇಲೆ ಹೆಂಡತಿ ಶ್ಯಾಣಾ ಆದಳು ಎಂಬಂತೆ ಹೈದ್ರಾಬಾದ್ ಕರ್ನಾಟಕದ ರಾಜಕಾರಣಿಗಳಿಗೆ ಇದೀಗ ಜ್ಞಾನೋದಯವಾಗಿದೆ. ಇದೆ ಭಾಗದ ರಾಜಕಾರಣಿಗಳಾದ ವೀರೇಂದ್ರ ಪಾಟೀಲ , ಧರ್ಮಸಿಂಗ್ ಕರ್ನಾಟಕ ಶಾಜ್ಯದ ಮುಖ್ಯಮಂತ್ರಿಯಾಗಿದ್ದಾಗಲೂ ಏನೊಂದು ಕಿಸಿಯದ ಇವರು ಇದೀಗ ನೆಲಮುಗಿಲು ಒಂದಾಗುವಂತೆ ಚೀರಾಡುತ್ತಿರುವುದು ವಿಪರ್ಯಾಸದ ಸಂಗತಿಯಾಗಿದೆ. ವೈಜನಾಥ ಪಾಟೀಲ ಎಂಬ ಮರೆಗುಳಿ ರಾಜಕಾರಣಿ ತಾನು ಅಧಿಕಾರ ಖುರ್ಚಿಯಲ್ಲಿ ಕುಳಿತಿದ್ದಾಗ ಹೈದ್ರಾಬಾದ ಕರ್ನಾಟಕದ ಖ್ಯಾಲು ಇಲ್ಲದೆ ಓಡಾಡುತ್ತಿದ್ದರು. ಇದೀಗ ಮಾತ್ರ ಈ ಸಂಗತಿಗೆ ದೆವ್ವದಂತೆ ಗಂಟುಬಿದ್ದು ಕೇಂದ್ರ ಹಾಗೂ ರಾಜ್ಯ ಸರಕಾರಗಳನ್ನು ಕಾಡುತ್ತಿದ್ದಾರೆ.

ನಿಜಕ್ಕೂ ಕರ್ನಾಟಕ ರಾಜ್ಯದ ವಿವಿಧ ಜಿಲ್ಲೆಗಳ ಅಭಿವೃದ್ಧಿಗೆ ಹೋಲಿಸಿದರೆ ಹೈದ್ರಾಬಾದ್ ಕರ್ನಾಟಕ ಪ್ರದೇಶದ ತೆಕ್ಕೆಗೆ ಬರುವ ರಾಯಚೂರು ,ಗುಲಬರ್ಗಾ ಹಾಗೂ ಬೀದರ ಜಿಲ್ಲೆಗಳ ಅಭಿವೃದ್ಧಿ ಎಳ್ಳಷ್ಟು ಸಮವಿಲ್ಲ. ಇದಕ್ಕೆ ಚಾರಿತ್ರಿಕ ಕಾರಣವಿರುವಂತೆ ಇಲ್ಲಿನ ರಾಜಕಾರಣಿಗಳ ಸ್ವಾರ್ಥತತೆಯೂ ಕಾರಣವಾಗಿದೆ. ಭಾರತ ದೇಶದ ಎಲ್ಲಾ ರಾಜ್ಯಗಳ ಭಾಗಗಳು ೧೯೪೭ , ೧೫ ಆಗಸ್ಟಕ್ಕೆ ಸ್ವಾತಂತ್ರ್ಯ ದೊರೆತು ಸಂಭ್ರಮಾಚರಣೆಯಲ್ಲಿ ತೊಡಗಿದ್ದರೆ , ಈ ಹೈದ್ರಾಬಾದ ಕರ್ನಾಟಕ ರಾಜ್ಯ ನಿಜಾಮನ ಆಳ್ವಿಕೆಗೆ ಒಳಪಟ್ಟು ಕತ್ತುಸಿರು ಬಿಡುತ್ತಿತ್ತು. ನಿಜಾಮನ ದಿರ್ಭಾದಲ್ಲಿದ್ದ ಮಹ್ಮದ ರಜ್ವಿ ಎಂಬ ಆತನ ಸಲಹಾ ಮಂತ್ರಿಯಿಂದಲಂತೂ ನಿಜಾಮನ ಆಳ್ವಿಕೆ ಹಳ್ಳಹಿಡಿದು ಸಾಗಿತ್ತು.



ಸಂಕುಚಿತ ಮನಸ್ಸಿನ , ಪ್ರಜೆಗಳ ಮೇಲೆ ದಬ್ಬಾಳಿಕೆ ನಡೆಸುವುದೆ ರಾಜಾಡಳಿತ ಎಂದು ನಂಬಿದ್ದ ಕಾಲದಲ್ಲಿ ಸಾರ್ವಜನಿಕ ಅಭಿವೃದ್ಧಿ ಕಾರ್ಯಗಳಿಗಿಂತ ತಮ್ಮ ಅಭ್ಯುದಯದ ಕನಸೆ ನಿಜಾಮನಿಗೆ ಬಹಳವಾಗಿತ್ತು. ಇದರಿಂದ ಸಹಜವಾಗಿಯೆ ಜನರು ಆಡಳಿತಾತ್ಮಕ ಸೌಲಭ್ಯಗಳಿಲ್ಲದೆ ಹಿಂದುಳಿಯತೊಡಗಿದರು. ಯಾವಾಗ ಉಕ್ಕಿನ ಮನುಷ್ಯ ಎಂಬ ಖ್ಯಾತಿಗೆ ಪಕ್ಕಾಗಿದ್ದ ಸರದಾರ ವಲ್ಲಭಭಾಯಿ ಪಟೇಲ ಒಂದು ದೃಢವಾದ ನಿರ್ಧಾರಕ್ಕೆ ಬಂದರೋ ಆಗ ಹೈದ್ರಾಬಾದ ಕರ್ನಾಟಕದ ನಿಜಾಮನ ಆಳ್ವಿಕೆಯಿಂದ ಮುಕ್ತಿದೊರಕಿತು.

ಆಗಲಾದರೂ ಈ ರಾಜ್ಯದ ಆಡಳಿತದ ಚುಕ್ಕಾಣಿ ಹಿಡಿದ ರಾಜಕಾರಣಿಗಳು ಕೀಳು ರಾಜಕೀಯದಲ್ಲಿ ತೊಡಗದೆ ಹೈದ್ರಾಬಾದ್ ಕರ್ನಾಟಕದ ಅಭಿವೃದ್ಧಿಗೆ ತೊಡಗಿದ್ದರೆ ಇಂದಿನ ದುರ್ ವ್ಯವಸ್ಥೆ ಬಹುಶಃ ಇರುತ್ತಿರಲಿಲ್ಲ. ಸ್ವಾತಂತ್ರ್ಯ ದೊರೆತು ಅರ್ಧ ಶತಮಾನವೇ ಕಳೆದು ಹೋಗಿದ್ದರೂ ಈ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಹಳ್ಳಿಗಳಲ್ಲಿ ಶುದ್ಧವಾದ ಕುಡಿಯುವ ನೀರಿನ ವ್ಯವಸ್ಥೆ ಕೂಡ ಮಾಡಲಾಗಿಲ್ಲ. ಹಳ್ಳಿಗಳಿಗೆ ಹೋಗುವ ರಸ್ತೆಗಳು ಅವುಗಳೆಲ್ಲ ಅಕ್ಷರಶಃ ತಿಪ್ಪೆಗುಂಡಿಗಳು. ಯಾವುದೆ ಹಳ್ಳಿ ಪ್ರವೇಶಿಸಿದರೂ ನಿಮ್ಮ ಮೂಗಿಗೆ ಅಡರುವ ಗಬ್ಬು ನಾತ , ಬಯಲು ಸಂಡಾಸುಗಳಿಂದ ಉಂಟಾಗಿದ ವಾಯು ಮಾಲಿನ್ಯ. ಅಕ್ಷರಶಃ ಇವತ್ತಿಗೂ ಇಲ್ಲಿನ ಮಹಿಳೆಯರು ರಸ್ತೆಯ ಇಕ್ಕೆಲಗಳಲ್ಲಿ ಚರಿಗೆ ಹಿಡಿದು ಸಂಡಾಸು ಕುಳಿತಿರುವುದನ್ನು ನೀವು ಯಾರಾದರೂ ಗಮನಿಸಬಹುದು.ಇಂಥ ತೀರಾ ಬಗ್ಗಡಗೊಂಡ ಹಳ್ಳಿಗಳಲ್ಲಿ ಶಾಲೆಗಳ ಕಟ್ಟಡ , ಸರಕಾರಿ ಸೌಲಭ್ಯಗಳಾದರೂ ತಲುಪುವುದಾದರೂ ಎಂತು ?

ಇದನ್ನೆಲ್ಲ ಗಮನಿಸಿಯೆ ಡಾ.ಡಿ.ಎಂ.ನಂಜುಂಡಪ್ಪ ಸಮಿತಿಯು ನೇತೃತ್ವದಲ್ಲಿ ವರದಿಯೊಂದನ್ನು ತಯಾರಿಸಿ ಅದು ಸರಕಾರಕ್ಕೆ ತಲುಪಿಸಿತು. ಆದರೂ ಕೆಲವು ವರ್ಷಗಳ ಕಾಲ ವಿಧಾನಸೌಧದಲ್ಲಿ ಅದು ಧೂಳು ತಿನ್ನುತ್ತಾ ಕುಳಿತುಕೊಂಡಿತು. ಯಾವಾಗ ವೀರೇಂದ್ರ ಪಾಟೀಲ ಕರ್ನಾಟಕ ಸರಕಾರದ ಮುಖ್ಯಮಂತ್ರಿಯಾಗಿ ಆಯ್ಕೆಯಾದರೋ ಆಗ ಅವರು ಈ ಫೈಲ್‌ನ್ನು ಕೈಗೆತ್ತಿಕೊಂಡು ಹೈದ್ರಾಬಾದ್ ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಳಿಯನ್ನು ಮಾರ್ಚ ೧೯೯೨ ರಿಂದ ಜಾರಿಯಲ್ಲಿ ತಂದರು. ಮಂಡಳಿಯ ವ್ಯಾಪ್ತಿಯಲ್ಲಿ ಬರುವ ೫ ಜನ ಸಂಸತ್ ಸದಸ್ಯರು, ೪೨ ಜನ ವಿಧಾನ ಸಭಾ ಸದಸ್ಯರು, ೧೧ ಜನ ವಿಧಾನ ಪರಿಷತ್ ಸದಸ್ಯರು, ೫ ಜನ ಜಿಲ್ಲಾ ಪಂಚಾಯತ್ ಅಧ್ಯಕ್ಷರು ಮತ್ತು ಹತ್ತು ಜನಕ್ಕೆ ಮೀರದಂತೆ ಸರಕಾರದಿಂದ ನೇಮಕಾತಿಗೊಂಡ ಸದಸ್ಯರು ಈ ಮಂಡಳಿಯ ಸದಸ್ಯರಾಗಿದ್ದು, ಸರಕಾರದ ಕಾರ್ಯದರ್ಶಿ ಮಟ್ಟದ ಅಧಿಕಾರಿಗಳು ಮಂಡಳಿಯ ಸದಸ್ಯ ಕಾರ್ಯದರ್ಶಿಗಳಾಗಿರುತ್ತಾರೆ.



೧೯೯೧-೧೯೯೨ ನೇ ಸಾಲಿನಲ್ಲಿ ಆರಂಭಗೊಂಡ ಹೈದ್ರಾಬಾದ್ ಕರ್ನಾಟಕ ಅಭಿವೃದ್ಧಿ



ಮಲ್ಲಿಕಾರ್ಜುನ ಖರ್ಗೆ

ತನ್ನ ಕೆಲಸವನ್ನು ಅಚ್ಚುಕಟ್ಟಾಗಿ ಮಾಡುತ್ತ ಬಂದಿದ್ದರೆ ಇಷ್ಟು ವರ್ಷಗಳಲ್ಲಿಯೇ ಹೈದ್ರಾಬಾದ್ ಕರ್ನಾಟಕ ಪ್ರದೇಶ ಕಲ್ಯಾಣ ಕರ್ನಾಟಕವಾಗಿ ವಿಜೃಂಭಿಸುತ್ತಿತ್ತು. ಆದರೆ ನಿಜಾಮನ ಆಳ್ವಿಕೆಯಲ್ಲಿ ಗುಲಾಮಗಿರಿಯನ್ನು ಆಧರಿಸುತ್ತ , ಅವನ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸುತ್ತ ಬಂದ ಇಲ್ಲಿನ ಜನಗಳಲ್ಲಿ ಇಂದಿಗೂ ಗುಲಾಮಗಿರಿಯ ಗುಣವಿದೆ. ಇಂದಿನ ರಾಜಕಾರಣಿಗಳನ್ನೂ ಅವರು ಹಿಂದಿನ ರಾಜಮಹಾರಾಜರಂತೆ ಭಾವಿಸುತ್ತಾರೆ. ರಾಜಕಾರಣಿಗಳಿರುವುದು ನಮ್ಮ ಸೇವೆಗಾಗಿ ಎನ್ನುವುದಕ್ಕಿಂತಲೂ ನಾವುಗಳಿರುವುದೇ ಅವರ ಸೇವೆಗಾಗಿ ಎಂಬ ದಾಸ್ಯದ ಮನೋಭಾವ ಇಲ್ಲಿನ ಪ್ರಜೆಗಳಲ್ಲಿ ಹಾಸುಹೊಕ್ಕಾಗಿ ಬೆರೆತುಹೋಗಿದೆ. ಇದರಿಂದ ಇಲ್ಲಿನ ರಾಜಕಾರಣಿಗಳು ಈ ಭಾಗದ ಅಭಿವೃದ್ಧಿಗಾಗಿ ಸರಕಾರದಿಂದ ಕಾಲಕಾಲಕ್ಕೆ ಹೈ.ಕ.ಅ.ಮಂಡಳಿಗೆ ಬಿಡುಗಡೆಯಾಗುವ ಹಣದಲ್ಲಿ ಮುಕ್ಕಾಲು ಪಾಲು ನೇರ ರಾಜಕಾರಣಿಗಳ ಜೇಬಿಗೆ ಹೋಗಿ ಸೇರುತ್ತದೆ. ಉಳಿದ ಹಣದಲ್ಲಿ ಇಲ್ಲಿನ ಕಂಟ್ರ್ಯಾಕ್ಟುದಾರರು ಮುಕ್ಕಿ ಬಿಡುತ್ತಾರೆ. ಹೀಗಾಗಿ ಅಭಿವೃದ್ಧಿ ಎಂಬುದು ಒಂದು ಮರೀಚಿಕೆ ಅಷ್ಟೆ.

ಡಾ.ಡಿ.ಎಂ.ನಂಜುಂಡಪ್ಪ ವರದಿಯ ಪ್ರಕಾರ ೨೦೧೦ರ.ವೇಳೆಗೆ ೬೪೦೦.೦೦ ಕೋಟಿ ಖರ್ಚುಮಾಡಬೇಕಿತ್ತು. ಸರಕಾರ ಕೂಡ ಕಾಲಕಾಲಕ್ಕೆ ತನ್ನ ಬಜೆಟ್ ನಲ್ಲಿ ಈ ಪ್ರದೇಶದ ಅಭಿವೃದ್ಧಿಗಾಗಿ ಹಣವನ್ನು ತೆಗೆದು ಇಡಬೇಕಾಗಿತ್ತು. ಆದರೆ ಹೈದ್ರಾಬಾದ್ ಕರ್ನಾಟಕದ ರಾಜಕಾರಣಿಗಳ ಇಚ್ಛಾಶಕ್ತಿಯ ಕೊರತೆ ಮತ್ತು ಈ ಬಗೆಗೆ ಇರುವ ಅವರ ದಿವ್ಯ ಅಜ್ಞಾನದಿಂದ ಇದುವರೆಗೆ ಆಡಳಿತ ಚುಕ್ಕಾಣಿ ಹಿಡಿದ ರಾಜಕೀಯ ಪಕ್ಷಗಳು ಅನಾದರ ತೋರಿಸುತ್ತ ಬಂದವು. ಇದೆಲ್ಲದರಿಂದ ಸಹಜವಾಗಿಯೆ ಈ ಪ್ರದೇಶ ಇಂದಿಗೂ ಪ್ರಾಥರ್ಮಿಕ ಸೌಲಭ್ಯಗಳಿಲ್ಲದೆ ತೀರಾ ಬಗ್ಗಡಗೊಂಡು ನಿಂತುಬಿಟ್ಟಿದೆ.

ಯಾವುದೇ ಮನುಷ್ಯ ಮೊಧ ಮೊದಲು ಅನ್ಯಾಯವನ್ನು ಸಹಿಸುತ್ತಾನೆ. ಅದು ಕೊನೆಗೆ ತನ್ನ ಅಸ್ತಿತ್ವಕ್ಕೆ ಧಕ್ಕೆ ತಗುಲುತ್ತದೆ ಎಂದಾದಾಗ ಅನಿವಾರ್ಯವಾಗಿ , ಅಥವಾ ತನ್ನ ಉಳಿವಿಗಾಗಿ ಕೊನೆಯ ಹೋರಾಟಕ್ಕೆ ಸಜ್ಜಾಗುತ್ತಾನೆ. ಇಂಥ ಹೋರಾಟಕ್ಕೆ ಕೊನೆಗೂ ಇಲ್ಲಿನ ಜನಸಾಮಾನ್ಯರು ಸಜ್ಜಾಗಿದ್ದಾರೆ. ಇಲ್ಲದೆ ಹೋದರೆ ಪ್ರತ್ಯೇಕ ರಾಜ್ಯದ ಬೇಡಿಕೆಗೂ ಅವರು ಹಿಂದೆ ಮುಂದೆ ನೋಡದ ಸ್ಥಿತಿ ಉಂಟಾಗಿದೆ. ಈಗಾಗಲೆ ಹೈದ್ರಾಬಾದ್ ಕರ್ನಾಟಕ ಪ್ರದೇಶದ ಮ್ಯಾಪು, ಧ್ವಜ ಎಲ್ಲವೂ ಸಾರ್ವಜನಿಕರ ವಲಯುದಲ್ಲಿ ಬಯಲಾಗಿವೆ. ಒಂದೆರಡು ಸಲ ಹೈದ್ರಾಬಾದ ಕರ್ನಾಟಕ ವಿಮೋಚನೆಯ ದಿನಾಚರಣೆಯ ದಿನವೇ ಪ್ರತ್ಯೇಕ ಧ್ವಜಾರೋಹಣದ ಪ್ರಹಸನವೂ ಜರುಗಿದೆ.

ಈಗಲೂ ಕೇಂದ್ರ ಸರಕಾರ ಹಾಗೂ ರಾಜ್ಯ ಸರಕಾರಗಳು ಕಣ್ಣು ತೆರೆಯದೆ ಹೋದರೆ ಹೈದ್ರಾಬಾದ್ ಕರ್ನಾಟಕದ ಪ್ರತ್ಯೇಕತೆಯ ಕೂಗಿಗೆ ಅವರೇ ಮೂಲ ಧಾತೃಗಳಾಗುತ್ತಾರೆ.

# ವಿದರ್ಭ ; ತೆಲಂಗಾಣ ಮಾದರಿಯ ಸೌಲಭ್ಯಗಳಲ್ಲಿ ಯಾವುದು ಸೂಕ್ತ ?



ಸಂವಿಧಾನದ ೩೭೧ ಕಲಂ ತಿದ್ದು ಪಡಿಯ ಮೂಲಕ ಹೈದ್ರಾಬಾದ್ ಕರ್ನಾಟಕಕ್ಕೆ ಅಂಟಿಕೊಂಡಿರುವ ಹಿಂದುಳಿದ ಪಟ್ಟಿಯನ್ನು ಕಿತ್ತು ಹಾಕಬೇಕು ಎಂಬ ಕೂಗಿಗೆ ಕಳೆದ ಚುನಾವಣೆಯ ಸಂದರ್ಭದಲ್ಲಿ ಕಾಂಗ್ರೇಸ್ ಹಾಗೂ ಬಿಜೆಪಿಗಳು ಚುನಾವಣೆಯ ಪ್ರಮುಖ ಇಶ್ಯೂವಾಗಿಸಿಕೊಂಡಿದ್ದವು. ಗುಲಬರ್ಗಾಕ್ಕೆ ಚುನಾವಣೆಯ ಪ್ರಚಾರಕ್ಕೆ ಆಗಮಿಸಿದ್ದ ರಾಹುಲ್‌ಗಾಂಧಿ ೩೭೧ ಕಲಂ ತಿದ್ದು ಪಡಿ ಮಾಡಿ ಈ ಭಾಗಕ್ಕೆ ಇದುವರೆಗೆ ಆಗಿರುವ ಅನ್ಯಾಯುವನ್ನು ಸರಿಪಡಿಸುವುದಾಗಿಯೂ ಹೇಳಿಕೊಂಡಿದ್ದರು.

ಮಲ್ಲಿಕಾರ್ಜುನ ಖರ್ಗೆ ಹಾಗೂ ಧರ್ಮಸಿಂಗ್ ಎಂಬ ಈ ಭಾಗದ ಕರಟಕ - ದಮನಕರೂ ಈ ಬಗ್ಗೆ ಜನರಿಗೆ ಭರವಸೆ ನೀಡಿದ್ದರು. ಅಂದಂತೆ ಪ್ರಧಾನಿ ಮನಮೋಹನ್ ಸಿಂಗ್ ಕೂಡ ಲೋಕಸಭಾ ಚುನಾವಣೆಯ ಸಂದರ್ಭದಲ್ಲಿಯೆ ಕರ್ನಾಟಕ ಸರಕಾರಕ್ಕೆ ಪತ್ರವೊಂದನ್ನು ಬರೆದು ವಿದರ್ಭದ ಮಾದರಿಯಲ್ಲಿ ಹೈದ್ರಾಬಾದ್ ಕರ್ನಾಟಕ ಪ್ರದೇಶಕ್ಕೆ ವಿಶೇಷ ಅನುದಾನ ನೀಡುವುದಾಗಿ ಬರೆದಿದ್ದಾರೆ. ವಿಶೇಷವೆಂದರೆ ಈ ವಿದರ್ಭ ಮಾದರಿಯ ಕೇಂದ್ರದ ವಿಶೇಷ ಅನುದಾನವನ್ನು ಹಿಂದೆ ಧರ್ಮಸಿಂಗ್ ಮುಖ್ಯಮಂತ್ರಿಯಾಗಿದ್ದ ಸಂದರ್ಭದಲ್ಲಿಯೇ ತಿರಸ್ಕಾರ ಮಾಡಿತ್ತು. ಏಕೆಂದರೆ ವಿದರ್ಭ ಮಾದರಿಯ ಅನುದಾನದಲ್ಲಿ ಕೇಂದ್ರದಿಂದ ಹೆಚ್ಚಿನ ಹಣಕಾಸಿನ ಅನುದಾನ ದೊರೆಯುತ್ತದೆ. ಆದರೆ ಇದರಿಂದ ಈ ಪ್ರದೇಶದ ಸಮಗ್ರ ಅಭಿವೃದ್ಧಿ ಅಸಾಧ್ಯವಾಗಿದೆ.

ಬದಲಾಗಿ ತೆಲಂಗಾಣ ಮಾದರಿಯ ಕೇಂದ್ರದ ಅನುದಾನದಿಂದ ಇಲ್ಲಿನ ಜನಗಳಿಗೆ ಉದ್ಯೋಗ ಮತ್ತು ಶಿಕ್ಷಣದಲ್ಲಿ ಮೀಸಲಾತಿ ದೊರಕುತ್ತದೆ. ಇದರಿಂದ ಮಾನವ ಅಭಿವೃದ್ಧಿಯ ಸೂಚ್ಯಂಕದ ಪ್ರಮಾಣ ಹೆಚ್ಚುತ್ತದೆ ಎಂಬುದು ಹೋರಾಟಗಾರರ ವಾದವಾಗಿದೆ. ಈ ವಾದದಲ್ಲಿಯೂ ಹುರುಳಿಲ್ಲದೆ ಇಲ್ಲ.

ವಿದರ್ಭ ಮಾದರಿಯ ತಿದ್ದುಪಡಿಯಿಂದ ಈ ಭಾಗಕ್ಕೆ ಕೋಟ್ಯಂತರ ರೂಪಾಯಿಗಳ ಅನುದಾನ ಹರಿದು ಬರಬಹುದು. ಆದರೆ ಆ ಹಣ ಹೋಗಿ ಸೇರುವುದು ಈ ಭಾಗದ ಜನಸಾಮಾನ್ಯನ ಜೇಬಿಗಿಂತ ಈ ಭಾಗದ ರಾಜಕಾರಣಿಗಳ, ಕಂಟ್ರ್ಯಾಕ್ಟುದಾರರ ಜೇಬಿಗೆ ಎಂಬುದು ಇಲ್ಲಿನ ಬಹುತೇಕರ ಅಭಿಮತ.

ಈ ಮಾತಿಗೆ ಉದಾಹರಣೆಯಾಗಿ ಖರ್ಗೆ - ಧರ್ಮಸಿಂಗ್ - ದರ್ಶನಾಪುರ- ಗುತ್ತೇದಾರ ಮಾಲೀಕಯ್ಯ ಮುಂತಾದವರಿಂದ ಹಿಡಿದು ಸಣ್ಣ ಪುಟ್ಟ ಪುಢಾರಿಗಳನ್ನು ನೋಡಿದರು ಸಾಕು ಎಂಥವರಿಗೂ ಇದು ಮನದಟ್ಟಾಗುತ್ತದೆ !



ತನ್ನ ಪಕ್ಷದ ಶಾಸಕರನ್ನು ಬೆಂಗಳೂರಿಗೆ ಕಳಿಸಿದರೆ ಹೈದ್ರಾಬಾದ್ ಕರ್ನಾಟಕದ ಸಮಗ್ರ ಚಿತ್ರಣವನ್ನೆ ಬದಲು ಮಾಡುತ್ತೇನೆ ಎಂದು ಬಹು ದೊಡ್ಡದಾಗಿ ಬೊಗಳೆ ಬಿಟ್ಟಿದ್ದ ಮುಖ್ಯಮಂತ್ರಿ ಯಡ್ಡಿ ಹೈ.ಕ.ಅ.ಮಂಡಳಿಗೆ ತನ್ನ ಬಜೆಟ್ ನಲ್ಲಿ ಕೇವಲ ೨೧ ಕೋಟಿ ಮಾತ್ರ ಬಿಡುಗಡೆ ಮಾಡಿತು.

ಈ ಮೂಲಕ ತಾನು ಆಡಿದ ಮಾತಿಗೆ ತಕ್ಕುದಾಗಿ ನಡೆಯುವ ಜಾಯಮಾನ ತನ್ನದಲ್ಲ ಎಂದು ಚಡ್ಡಿ ಸರಕಾರ ತೋರಿಸಿಕೊಂಡಿತು. ಆಶ್ಚರ್ಯವೆಂದರೆ ರಾಜ್ಯಪಾಲ ರಾ ಮೇಶ್ವರ ಠಾಕೂರ ಇದ್ದ ಸಂದರ್ಭದಲ್ಲಿಯೆ ಈ ಹೈ.ಕ.ಅ.ಮಂಡಳಿಗೆ ೩೪ ಕೋಟಿ ರೂ.ಗಳು ಬಿಡುಗಡೆಯಾಗಿದ್ದವು.

ಡಾ.ಡಿ.ಎಂ.ಸಂಜುಂಡಪ್ಪ ವರದಿಯ ಪ್ರಕಾರ ಪ್ರತಿ ವರ್ಷ ಈ ಭಾಗದ ಅಭಿವೃದ್ಧಿಗಾಗಿ ೬೦ ಕೋಟಿ ರೂಪಾಯಿಗಳು ಬಿಡುಗಡೆಯಾಗಬೇಕು. ಆದರೆ ವೀರೇಂದ್ರ ಪಾಟೀಲ ಮುಖ್ಯ ಮಂತ್ರಿಯಾಗಿದ್ದ ಸಂದರ್ಭದಲ್ಲಿ ಮಾತ್ರ ಈ ಮೊತ್ತದ ಹಣ ಬಿಡುಗಡೆಯಾಗಿದೆ. ಆನಂತರ ಬಂದ ಬಹುತೇಕ ಮುಖ್ಯ ಮಂತ್ರಿಗಳು ಬಜೆಟ್ ನಲ್ಲಿ ಕೊಟ್ಟಂತೆ ಮಾಡಿ ಹಿಂದಿನಿಂದ ಕಸಿದುಕೊಂಡು ಬಂದಿವೆ. ತೀರಾ ಇತ್ತೀಚೆಗೆ ಮಾತ್ರ ಅಧಿಕಾರ ಇಲ್ಲದೆ ಕಂಗಾಲಾಗಿ ಹೋಗಿರುವ ಕಾಂಗ್ರೈ ಶಾಸಕರು ಎಚ್.ಕೆ.ಡಿ.ಬಿ. ಮೀಟಿಂಗ್ ನಲ್ಲಿ ಕುಳಿತು ಪಟ್ಟಾಂಗ ಹೊಡೆಯದೆ ತಮ್ಮ ಜೀವನದಲ್ಲೇ ಮೊಟ್ಟ ಮೊದಲ ಸಲ ಸಭೆ ಬಹಿಷ್ಕರಿಸಿ, ಮು.ಮಂತ್ರಿಗಳ ನೇತೃತ್ವದಲ್ಲಿಯೆ ಸಭೆ ನಡೆಯಲಿ ಎಂದು ಗುಡುಗಿ ಹೊರಬಂದಿದ್ದಾರೆ.

ಕಾಂಗ್ರೈ ಪಕ್ಷವೇ ಆಗಿರಬಹುದು. ಬಿ.ಜೆ.ಪಿ ಹಾಗೂ ಜೆ.ಡಿ.ಎಸ್. ಸರಕಾರಗಳೇ ಆಗಿದ್ದರೂ ಅವೆಲ್ಲವೂ ಈ ಭಾಗದ ಜನಗಳ ಓಟು ಹೊಡಕೊಳ್ಳುವವರೆಗೆ ಮಾತ್ರ ಮೊಸಳೆ ಕಣ್ಣೀರು ಸುರಿಸಿ ಗದ್ದುಗೆ ಹತ್ತುತ್ತವೆ . ಆನಂತರ ಇದ್ದೆ ಇದೆಯಲ್ಲ. ಹೊಳೆದಾಡಿದ ಮೇಲೆ ಅಂಬಿಗನ ಮಿಂಡ ಎಂಬಂತೆ ವರ್ತಿಸುತ್ತವೆ. ಇಂಥ ಶರ್ಮಗೇಡಿ ಸರಕಾರಗಳಿಗೆ ಪಕ್ಷದ ನೇತಾರರಿಗೆ ಪಾಠ ಕಲಿಸಬೇಕಾದವರು ಯಾರು ?

ಬೆಳಕಿನ ಕಿಂಡಿ

# ಚಿಂತೆಗಳ ನಡುವೆ ನಿಶ್ಚಿಂತವಾಗಿರುವುದು ಹೇಗೆ ?

ಪೂಜ್ಯ ಶ್ರೀ ಸಿದ್ಧೇಶ್ವರ ಸ್ವಾಮಿಗಳು
ಸಂಗ್ರಹ : ಶಿವರಂಜನ್ ಸತ್ಯಂಪೇಟೆ

ನಮಗೆ ಏನು ಕಾಣುತ್ತದೋ ಅದು ಸತ್ಯ. ಅದಕ್ಕೆ ಕಾಣುವ ಸತ್ಯ ಎನ್ನುತ್ತಾರೆ. ನಮಗೆ ಕಾಣಿಸದಂತೆ ಇರುವ ಸತ್ಯವೂ ಇದೆ. ಅದಕ್ಕೆ ಕಾಣದ ಸತ್ಯ ಎಂದು ಕರೆಯುತ್ತಾರೆ. ಇಂಥ ಎರಡೂ ಸತ್ಯವನ್ನು ಕಂಡವರಿಗೆ ಸಾಕ್ಷಾತ್ಕಾರಿಗಳು ಎನ್ನುತ್ತಾರೆ. ಅಲ್ಲೊಂದು ಹೂ ಕಾಣಿಸುತ್ತದೆ. ಅದು ಕಾಣುವ ಸತ್ಯ. ಅದರೊಳಗೆ ಅಡಗಿರುವ 'ಪ್ರಾಣತತ್ವ' ಕಣ್ಣಿಗೆ ಕಾಣಿಸುವುದಿಲ್ಲ. ಅದು ಕಾಣದ ಸತ್ಯ. ಮನುಷ್ಯನ ಪ್ರತಿಯೊಂದು ಇಂದ್ರಿಯಗಳಿಗೆ ತನ್ನದೆ ಆದ ಇತಿ ಮಿತಿಗಳಿವೆ. ಅದರ ಆಚೆಗೆ ಇರುವ ಸತ್ಯ ಕಾಣುವುದಿಲ್ಲ.

ಇದನ್ನೇ ಶರಣರು 'ಬಯಲು' ಎಂದು ಕರೆದರು. ಋಷಿಗಳು 'ಪರವಸ್ತು' ಎಂದು ಕರೆದರು. ಭಗವಾನ್ ಬುದ್ಧ 'ಮೌನ' ಎಂದು ಕರೆದರು. ಕಣ್ಣಿಗೆ ಕಾಣದಂತಿರುವ ವಸ್ತುವಿನ ಕುರಿತು ಅರಿತುಕೊಳ್ಳುವುದೇ ನಿಜವಾದ ಜ್ಞಾನ. ಅದನ್ನು ಯಾರು ಅರಿತುಕೊಳ್ಳುತ್ತಾರೋ ಅವರು ಅಪ್ರತಿಮ ಜ್ಞಾನಿಗಳು. ಅಂಥವರ ಮಾತು ಬಹಳ ಮಹತ್ವದ್ದು. ನಾವು ಕಾಣುವ ಜಗತ್ತಿನಲ್ಲಿ ಬದುಕಬೇಕಾಗುತ್ತದೆ. ಇಲ್ಲಿ ಎಲ್ಲವೂ ಹಿತವಾಗಿರುವುದಿಲ್ಲ. ಹೂ ಅರಳಿದಂತೆ, ಹೂ ಬಾಡಿದಂತೆ ಜೀವನ ಸುರಳಿತ ಅಲ್ಲ. ಎಲ್ಲವನ್ನೂ ಎದುರಿಸಬೇಕಾಗುತ್ತದೆ. ಮುಪ್ಪು-ಸಾವುಗಳ ಮಧ್ಯೆಯೂ ಒಂದು 'ಸುಂದರ ಕ್ಷಣ'ವಿದೆ. ಮಿಂಚಿನ ಬೆಳಕಿದೆ. ಅದನ್ನು ಅನುಭವಿಸಬೇಕಾದರೆ ಚಿಂತೆಗಳ ಮಧ್ಯೆ ನಿಶ್ಚಿಂತವಾಗಿರುವುದನ್ನು ರೂಢಿಸಿಕೊಳ್ಳಬೇಕು. ಹಕ್ಕಿಯೊಂದು ಮೊಟ್ಟೆಗಳಿಗೆ ಕಾವು ಕೊಡುತ್ತ ಹಾಡುತ್ತ ಕುಳಿತಿತ್ತು. ಮರಿಗಳ ಬಗ್ಗೆ ಸುಂದರ ಕನಸು ಕಾಣುತ್ತ ಮುಂದಿನದು ಮಧುರ ಜಗತ್ತು ಎಂದು ಬಗೆದಿತ್ತು. ಎಲ್ಲಿಂದಲೋ ಬಂದ ಬಿರುಗಾಳಿಗೆ ಅದರ ಗೂಡು ಅಲುಗಾಡಿತು. ಮೊಟ್ಟೆಗಳು ಕೆಳಗೆ ಬಿದ್ದವು. ಕನಸು ನುಚ್ಚು ನೂರಾಗಿತ್ತು. ಕ್ಷಣ ಹೊತ್ತು ಅದರ ಕಣ್ಣಲ್ಲಿ ನೀರು ಬಂದವು. ನಂತರ ಮತ್ತೆ ಹಾಡಲು ಪ್ರಾರಂಭಿಸಿತು. 'ಈ ದುಃಖದ ಸಮಯದಲ್ಲೂ ಮತ್ತೆ ಹಾಡುತ್ತಿರುವೆಯಲ್ಲ' ಎಂದು ಮರ ಕೇಳಿತು. ಆಗ ಹಕ್ಕಿ ಹೇಳಿತು, ನಾವು ಈ ಜಗತ್ತಿಗೆ ಬಂದುದು ಅಳಲಿಕ್ಕೆ ಅಲ್ಲ. ನಾವು ಬಂದಿರುವುದು ಹಾಡಲಿಕ್ಕೆ ಎಂದು ಹೇಳಿತು. ಅದೇ ರೀತಿಯಾಗಿ ಬಡತನದ ಮಧ್ಯೆಯೂ ನಾವು ನಲಿವು ಕಾಣಬೇಕು. ತಲೆಯಿಂದ ಬಂದುದು ತಾಪಕ್ಕೆ ಕಾರಣವಾದರೆ ಎದೆಯೊಳಗಿನದು ತಂಪು ನೀಡುತ್ತದೆ.



ಬಲ್ಲವರ ಮಾತು ಮೆಲಕು ಹಾಕುವುದರಿಂದ ಹಾಗೂ ಉತ್ತಮರ ಸಂಗದಿಂದ ಜಗತ್ತು ಸುಂದರವಾಗಿ ಕಾಣುತ್ತದೆ. ಮನದ ಬಾಗಿಲು ತೆಗೆದು ನೋಡಿದರೆ ಮನಸ್ಸು ಮಧುರ ಆಗುತ್ತದೆ.

# ದಾಸನಾಗುವುದು ಸೇವಕನೆನಿಸಿಕೊಳ್ಳುವುದು ಮನುಷ್ಯನಿಗೆ ತಕ್ಕುದಲ್ಲ



ದೇವರು ಮತ್ತು ದೆವ್ವ , ಸ್ವರ್ಗ ಮತ್ತು ನರಕ , ಶುಭ ಮತ್ತು ಅಶುಭ – ಈ ದ್ವಂದ್ವದ ನಡುವೆ ಮನುಷ್ಯನು ಬಲು ಕೆಟ್ಟ ರೀತಿಯಲ್ಲಿ ಸಿಲುಕಿಕೊಂಡಿರುವನು. ಅರೆಯಲ್ಪಟ್ಟಿರುವನು.ಮನುಷ್ಯನ ಈ ದುರ್ಗತಿ , ದಾಸ್ಯ ವೃತ್ತಿಯಲ್ಲಿ ಅವನಿರುವುದು ಸರಿಯಲ್ಲ. ಅವನು ಸ್ವತಂತ್ರವಾಗಿರಬೇಕು. ತಾನೇ ತನ್ನ ಮಾಲಿಕನಾಗಬೇಕು. ಅವನ ನಡೆ ನುಡಿಗಳು – ಕಾರ್ಯಾಚರಣೆಗಳು ಈಶ್ವರ ಇಚ್ಛೆಯಂತಲ್ಲ ನಡೆಯಬೇಕಾದುದು. ತನ್ನ ಜಾಗೃತಿ , ತನ್ನ ಪ್ರೇರಣೆ , ತನ್ನ ಸ್ವಾತಂತ್ರ್ಯಗಳಿಂದ **ಪ್ರಸ್ಫುಟಿಸಬೇಕು.**

ದೇವ – ದೆವ್ವಗಳೆಂಬ ಭಾವನೆಯೇ ನಿಮ್ಮನ್ನು ಒಬ್ಬನ ಅಥವಾ ಮತ್ತೊಬ್ಬನ ದಾಸನನ್ನಾಗಿ ಮಾಡುವುದು. ಪಾಪಿಯಾದವನು ದೆವ್ವಕ್ಕೆ ದಾಸನಾಗುವನು – ಸಾಧುವಾದವನು ದೇವರ ಸೇವಕನಾಗುವನು. ಆದರೆ ದಾಸನೆನಿಸಿಕೊಳ್ಳುವುದಾಗಲಿ , ಸೇವಕನೆನಿಸಿಕೊಳ್ಳುವುದಾಗಲಿ ಮನುಷ್ಯನ ಗರಿಮೆಗೆ ತಕ್ಕದ್ದಲ್ಲ.

ಆದ್ದರಿಂದಲೇ ನಾನು ನಿಮಗೆ – ಈಶ್ವರನೂ ಸತ್ತನೂ. ದೆವ್ವವೂ ಸತ್ತಿತ್ತು– ಎಂದು ಹೇಳುವೆ. ನೀವು ಜೀವಂತವಿರಬೇಕಾದರೆ ಅವರಿಬ್ಬರ ಸಾವು ಅನಿವಾರ್ಯ.ಅವರು ಜೀವಿಸಿದ್ದರೆ ನೀವು ಘೋರ ಮರಣಕ್ಕೆ ತುತ್ತಾಗುವಿರಿ. ಎರಡೂ ಬದಿಯಿಂದ ನೀವು ದಾರುಣವಾಗಿ ಸಿಕ್ಕಿಕೊಳ್ಳುವಿರಿ. ಆಗ ಮನುಷ್ಯನು ವಿಚಿತ್ರವಾದೊಂದು ಆಟವನ್ನು ಆಡಬೇಕಾಗುವುದು. ಅವನು ಮಾಡುವುದೆಲ್ಲ ದೆವ್ವನ ಕೆಲಸ– ಪೂಜೆ ಮಾತ್ರ ದೇವರದು. ಏಕೆಂದರೆ ಅವನು ಇಬ್ಬರನ್ನು ಸಂತೋಷ ಪಡಿಸಬೇಕಾಗುವುದು.

ಓರ್ವ ವೃದ್ಧ ಮನುಷ್ಯನು ಸಾಯುತ್ತ ಆಕಸ್ಮಾತ್ ದೇವರ ಪ್ರಾರ್ಥನೆ ಮಾಡತೊಡಗಿದ. ಅವನ ಸಂಸಾರದವರಿಗೆಲ್ಲ ಆಶ್ಚರ್ಯ– ಇದೇನು ಇವನು ದೆವ್ವವನ್ನು ಪ್ರಾರ್ಥಿಸುತ್ತಿರುವನಲ್ಲ – ಎಂದು ನೀನೇನು ಬೆಪ್ಪನೋ ಅಥವಾ ನಿನಗೇನಾದರೂ ಮರುಳು ಹಿಡಿದಿದೆಯೋ ? ನಿನ್ನ ಬಾಳಿನ ಕಡೆಯಗಳಿಗೆಯಲ್ಲಿ ದೆವ್ವನನ್ನೇಕೆ ಸ್ಮರಿಸುತ್ತಿರುವೆ ? ಎಂದು ಅವರೆಲ್ಲರೂ ಮುದುಕನನ್ನು ಕೇಳಿದರು.



ಈ ಮಾತು ಕೇಳಿ ಮುದುಕ ಹೇಳಿದ – ಕಡೆಯಗಳಿಗೆಯಲ್ಲಿ ನನಗೆ ಯಾವ ಆತಂಕವೂ ಇರಬಾರದು, ನಾನು ರಿಸ್ಕ್ ತೆಗೆದುಕೊಳ್ಳಲಾರೆ. ನಾನು ಎಲ್ಲಿಗೆ ಹೋಗುತ್ತೇನೋ ತಿಳಿಯದು. ನನಗೆ ದೇವನ ಭೇಟಿ ಆಗುವುದೋ ಅಥವಾ ದೆವ್ವದ ಭೇಟಿಯಾಗುವುದೋ ಯಾರಿಗೆ ಗೊತ್ತು? ಆದ್ದರಿಂದ ಇಬ್ಬರನ್ನೂ ಸ್ಮರಣೆ ಮಾಡುತ್ತಿದ್ದೇನೆ. ಯಾರ ಭೇಟಿ ಆದರೂ ಅವರು ನನ್ನ



ಮೇಲೆ ಬೇಸರ ತೋರಬಾರದು. ಯಾರಿಗೂ ನನ್ನ ಮೇಲೆ ಸಿಟ್ಟು ಬರಬಾರದು. ಯಾರೊಬ್ಬರೂ ಸಿಗಲಿಲ್ಲವೆಂದೇ ಭಾವಿಸೋಣ. ಅದರಿಂದ ನನಗಾವ ನಷ್ಟವಿಲ್ಲ. ಹಾಗಲ್ಲದೇ ಇಬ್ಬರೂ ಸಿಕ್ಕಿದರೂ ಸಹ ನನಗೆ ತೊಂದರೆಯಿಲ್ಲ. ಏಕೆಂದರೆ ನಾನು ಇಬ್ಬರನ್ನು ನೆನಪು ಮಾಡಿಕೊಂಡಿದ್ದೇನೆ. ಆದ್ದರಿಂದ ಮುಂದೆ ಏನೇನಾಗಬಹುದೆಂದು ಲೆಕ್ಕಹಾಕಿ ಎಲ್ಲ ವಿಧದಲ್ಲೂ ನನಗೆ ಯಾವ ಅಪಾಯವೂ ಆಗದಂತೆ ಹುಷಾರಾಗಿ ನಡೆದುಕೊಳ್ಳುತ್ತಿದ್ದೇನೆ.

ದೇವರು ಮತ್ತು ದೆವ್ವ , ಸ್ವರ್ಗ ಮತ್ತು ನರಕ , ಶುಭ ಮತ್ತು ಅಶುಭ – ಈ ದ್ವಂದ್ವದ ನಡುವೆ ಮನುಷ್ಯನು ಬಲು ಕೆಟ್ಟ



ರೀತಿಯಲ್ಲಿ ಸಿಲುಕಿಕೊಂಡಿರುವನು. ಅರೆಯಲ್ಪಟ್ಟಿರುವನು.ಮನುಷ್ಯನ ಈ ದುರ್ಗತಿ ನನಗೆ ಹಿಡಿದು. ಈ ದಾಸ್ಯ ವೃತ್ತಿಯಲ್ಲಿ ಅವನಿರುವುದು ಸರಿಯಲ್ಲ. ಅವನು ಸ್ವತಂತ್ರವಾಗಿರಬೇಕು. ತಾನೇ ತನ್ನ ಮಾಲಿಕನಾಗಬೇಕು. ಅವನ ನಡೆ ನುಡಿಗಳು – ಕಾರ್ಯಾಚರಣೆಗಳು ಈಶ್ವರ ಇಚ್ಛೆಯಂತಲ್ಲ ನಡೆಯಬೇಕಾದುದು. ತನ್ನ ಜಾಗೃತಿ , ತನ್ನ ಪ್ರೇರಣೆ , ತನ್ನ ಸ್ವಾತಂತ್ರ್ಯಗಳಿಂದ ಪ್ರಸ್ಫುಟಿಸಬೇಕು.

## ನೀ ಇಲ್ಲದ ಘಳಿಗೆ

ನೀ
ಜೊತೆಯಾಗುವೆ
ಎಂದು ಹೇಳಿದ
ದಿನದಿಂದ
ಗುಡ್ಡ ಬೆಟ್ಟಗಳು
ಹರಿವ ನದಿಗಳು
ಹೊಳೆಯುವ ಸೂರ್ಯ
ಚಂದ್ರ, ಚುಕ್ಕಿಗಳೆಲ್ಲ
ಹೊಸತನದಿಂದ
ಕಂಗೊಳಿಸುತ್ತಿದ್ದವು
ನೀ ಬಿಟ್ಟು ಹೋದ
ಕ್ಷಣದಿಂದ
ಅವೆಲ್ಲವೂ
ಕಾಣಿಸುತ್ತಲೇ
ಇಲ್ಲ

ಸದಾ
ನನ್ನೊಳಗೆ
ಮೊರೆಯುತ್ತಿದ್ದ
ಸಮುದ್ರದ ಅಲೆಗಳಂಥ
ನಿನ್ನ ನಗು
ಗಾಳಿಯ ಗಮಲು
ಮರ– ಗಿಡಗಳ
ಮರ್ಮರದ
ಶಬ್ಧಗಳೆಲ್ಲ
ನೀ ಬಿಟ್ಟು ಹೋದ
ಘಳಿಗೆಯಿಂದ
ಸ್ತಬ್ಧವಾಗಿವೆ

ನೀ ಇಲ್ಲದ
ಈ
ಘಳಿಗೆಗಳಿಗಾಗಲಿ
ಬದುಕಿಗಾಗಲಿ
ಜೀವಂತಿಕೆಯೇ
ಇಲ್ಲ
ಎಲ್ಲವೂ
ನಿರ್ಜೀವ !!



# ಮುಂಗಾರು ಮಳೆಯಂತೆ ಕೈಕೊಡಬೇಡ



ಪ್ರಿಯ ಗೆಳೆಯ

ನನಗೆ ಆದೇಕೋ ಒಮ್ಮೊಮ್ಮೆ ದಿಗಿಲಾಗುತ್ತಿದೆ. ಮುಂಗಾರು ಮಳೆಯ ದಿನಮಾನಗಳಲ್ಲಿ ಧೋ ಎಂದು ಒಂದೆ ಸಮ ಸುರಿಯಬೇಕಿದ್ದ ಮಳೆಗಳು ಮರೀಚಿಕೆಯಾಗಿವೆ. ಆಕಾಶ ತನ್ನ ಒಡಲ ತುಂಬ ಕಪ್ಪು ಕುದುರೆಯನ್ನು ರೇಶಿಗೆ ಇಟ್ಟಂತೆ ಒಂದೆ ಸಮ ಓಡಿಸುತ್ತಿವೆ. ಮುಂಗಾರಿನ ಈ ದಿನಮಾನಗಳಲ್ಲಿ ಮಳೆಗಿಂತ ಗಾಳಿಯೇ ಜೋರಾಗಿ ಬೀಸುತ್ತಿದೆ. ಇದರಿಂದ ನೆಲದ ಒಡಲು ಒಳಗೊಳಗೆ ಮಳೆಗಾಗಿ ಕಾದು ಕಾದು ಸೀದು ಹೋಗುತ್ತಿರುವುದು ಸುಳ್ಳಲ್ಲ.

ಹಳ್ಳ ಕೊಳ್ಳಗಳಂತೂ ಬತ್ತಿ ಬರುಡಾಗಿವೆ. ಕುಡಿಯುವ ನೀರಿಗೂ ತತ್ವಾರ ಎನ್ನುವ ಪರಿಸ್ಥಿತಿ ಎಲ್ಲೆಡೆ ಇದೆ. ಇಂಥ ದಿನಗಳಲ್ಲಿ ನಿನ್ನ ನೆನಪಾದಾಗಲೆಲ್ಲ ನನಗೆ ಅರಿವಿಲ್ಲದೆ ನನ್ನೊಳಗೆ ಅದೇಕೋ ನಡುಕ ಆರಂಭವಾಗುತ್ತದೆ. ಏಕೆಂದರೆ ಇತ್ತೀಚೆಗೆ ನೀನು ಅದೆಲ್ಲಿಗೋ ಹೋಗಿ ಬರುವಿ ಎಂದು ಹೇಳಿ ನನ್ನೊಂದಿಗಿನ ಸಂಪರ್ಕವನ್ನೆ ಕಳೆದುಕೊಂಡಿದ್ದಿ. ಈ ಸಂದರ್ಭ ನಿಜಕ್ಕೂ ನನ್ನಲ್ಲಿ ನೂರು ತಲ್ಲಣಗಳನ್ನು ಉಂಟು ಮಾಡಿದ್ದವು.

ಬಂದಂಗ್ಹ ಮಾಡಿ ಆಸೆಯ ತೋರಿ ಹೊಂಟೋದಿಯಲ್ಲೋ ಮಳೆರಾಯ ಎಂಬ ಹಾಡಿನ ಸಾಲು ನನ್ನೊಳಗೆ ಅದೇಕೋ ಜೋರಾಗಿ ರಿಂಗುಣಿಸುತ್ತಲೆ ಇತ್ತು. ಇದಕ್ಕೆ ಸರಿಸಾಟಿಯಾಗಿ ಮಳೆ ಕೈಕೊಟ್ಟು ಹಸಿರ ವನದೇವತೆ ಕೂಡ ಬೆತ್ತಲಾಗಿನಿಂತಿದ್ದಳು. ಎಲ್ಲಾ ಕಡೆ ಬರೀ ಆಷಾಢ ಗಾಳಿ ಬೀಸಿ ಮನಸ್ಸೆಲ್ಲ ಮಲೆತ ನೀರಿನಂತೆ ನಾರುತ್ತಿತ್ತು.

ನಿನ್ನ ಸಂಪರ್ಕ ಎಂಬ ಮಳೆಯೂ ಇಲ್ಲದೆ ಈ ಇಳೆಗೆ ಎಷ್ಟೆಷ್ಟು ಆತಂಕ, ತಲ್ಲಣ , ನೋವು ಉಂಟಾಗಿರಲಿಕ್ಕಿಲ್ಲ ? ಗೆಳೆಯ ಒಮ್ಮೆಯಾದರೂ ಯೋಚಿಸಿದ್ದೀಯೇನು ? ಪದೆ ಪದೆ ಕೆಲಸದ ಹೆಸರು ಹೇಳುತ್ತ ಇಷ್ಟಿಷ್ಟೇ ದೂರ ಆಗುತ್ತಿರುವ ನಿಜವಾದ ಗುಟ್ಟೇನು ? ನಿನ್ನ ನನ್ನ ನಡುವಿನ ಕನಸಿನ ಸೌಧ ನಿನ್ನ ಧ್ವನಿಯ ರಿಂಗುಣಿತವಿಲ್ಲದೆ ಬಣಗುಡುತ್ತಿದೆ. ಗೌವ್ವ ಎನ್ನುತ್ತಿವೆ.

ಕುಣಿಯೋಣ ಬಾ



ಮುಂಗಾರು ಮಳೆಯ ಮೋಡದಂತೆ ನನಗೆ ಕೈ ಕೊಟ್ಟು ಎಲ್ಲೋ ಹೋಗಿ ಧೋ ಎಂದು ಸುರಿದು ಜಲಪ್ರಳಯ ಉಂಟುಮಾಡಬೇಡ ಮಾರಾಯ. ನನ್ನತ್ತ ಒಮ್ಮೆ ನೋಡು ನಿನ್ನ ಪ್ರೀತಿಯ ಮಳೆ ಸುರಿ. ಆಗ ನೋಡು ಈ ಮೈ - ಮನವೆಲ್ಲ ನಿನಗಾಗಿ ಹಸಿರಿನಿಂದ ಹುಚ್ಚೆದ್ದು ಕುಣಿಯುತ್ತದೆ.

o ಕನಸು

# ಒಮ್ಮೆಯಾದರೂ ದೇವರ ಕಾಣಲಿಲ್ಲ !

- ಶಾಂತರಸ ರಾಯಚೂರು

ಒಮ್ಮೆಯಾದರೂ ಮೆಟ್ಟಿಲು ದೇವರ ಕಾಣಲಿಲ್ಲ
ತುಳಿದೇರುವ ನಿಜದೊಲವಿನ ಭಕ್ತರ ಕಾಣಲಿಲ್ಲ

ಚೆಂದುಳ್ಳಿ ಚೆಂಗುಲಾಬಿಯ ಹಿಂದಿರುವ ಮುಳ್ಳುಗಳು
ಸಾರುವ ಬದುಕಿನ ಗುಟ್ಟನರಿತವರ ಕಾಣಲಿಲ್ಲ

ಆಗಸಕೆ ಕೈಯೊಡ್ಡಿ ಸೊರಸೊರಗಿ ಸಣ್ಣಾದರೂ
ದೊರೆಯದೇನೂ ಎಂದರಿತ ಮನುಜರ ಕಾಣಲಿಲ್ಲ

ಅವಳ ಒಳಗಿನ ಸಿರಿಯ ಬೆಳುದಿಂಗಳನು ಮೊಗೆ ಮೊಗೆದು
ಮೋಹಾಂಧಕಾರ ನೀಗದ ರಸಿಕರ ಕಾಣಲಿಲ್ಲ

ಕೀಡಿಯಂತೆಯೆ ತಿಂದು ಕೀಡಿಯಂತೆಯೆ ಬೆಳೆದು
ಒಳಗೆ ಮೈ ಮುರಿದು ತುಂಬಿಯಾದವರ ಕಾಣಲಿಲ್ಲ

ದೇಹ ಬಲಗೊಳಿಸಿ ತನಿವಣ್ಣುಗಳ ತಿಂದೊಮ್ಮೆಯೂ
ಯಾರಿಗೂ ನೆರಳಾಗಿ ನಿಂತಿರುವರ ಕಾಣಲಿಲ್ಲ

ಒಲವು ದೂರಾದಾಗ ವಿರಹದಲಿ ದ್ವೇಷಗೈಯದೆ
ಬೆಂದು ಬೆಂದು ಕಡೆಯಾಣಿಯಾದವರ ಕಾಣಲಿಲ್ಲ

ಸೌಂದರ್ಯವನು ಕಂಡು ಸೋಲದೆ ಕಣ್ಣ ಮರೆಯಲಿ
ಮನ್ಮಥನ ಕುಚೇಷ್ಟೆಯನು ಗೆದ್ದವರ ಕಾಣಲಿಲ್ಲ

# ಸ್ವರ್ಗವನ್ನು ಸೃಷ್ಟಿಸಿದವರು ಮನೋರೋಗಿಗಳು

-ವಿವೇಕಾನಂದ



೦ ಜ.ಹೋ.ನಾರಾಯಣಸ್ವಾಮಿ , ಹಾಸನ

ಸ್ವರ್ಗವೆಂಬುದು ನಮ್ಮ ಕಾಮನೆಗಳಿಂದ ಉದಿಸಿದ ಒಂದು ಮೂಢನಂಬಿಕೆ , ಅಷ್ಟೆ. ಹಲವು ಬಗೆಯ ಸ್ವರ್ಗದ ಆದರ್ಶಗಳಲ್ಲೆಲ್ಲಾ ಮನೋದೌರ್ಬಲ್ಯವಿದೆ. ಅನೇಕ ವೇಳೆ ಅರೇಬಿಯಾ ದೇಶದ ಕವನಗಳಲ್ಲಿ, ಸ್ವರ್ಗವನ್ನು ನದಿಗಳು ತುಂಬಿ ಹರಿಯುತ್ತಿರುವ ಸುಂದರ ತೋಟವೆಂದು ಚಿತ್ರಿಸುವರು. ನೀರಿನ ಸಮೃದ್ಧಿಯಿರುವ ದೇಶದಲ್ಲಿ ನಾನು ಜೀವನದ ಬಹುಭಾಗವನ್ನು ಕಳೆದೆ. ಅಲ್ಲಿ ಪ್ರತಿವರುಷ ನೀರಿನಿಂದ ಹಲವು ಹಳ್ಳಿಗಳು ಕೊಚ್ಚಿಕೊಂಡು ಹೋಗುವವು. ಸಾವಿರಾರು ಪ್ರಾಣಿಗಳ ಆಹುತಿಯಾಗುತ್ತಿರುವುದು. ಆದಕಾರಣ ನನ್ನ ಸ್ವರ್ಗದಲ್ಲಿ ನದಿಗಳಿಂದ ಕೂಡಿದ ಉದ್ಯಾನವನವಿರುವುದಿಲ್ಲ. ಬಹಳ ಕಡಿಮೆ ಮಳೆಬೀಳುವ ದೇಶವನ್ನು ನಾನು ಆಶಿಸುತ್ತೇನೆ. ನಮ್ಮ ಸುಖ ಕೂಡ ಯಾವಾಗಲೂ ಬದಲಾಯಿಸುತ್ತಿರುವುದು. ನಮ್ಮ ಸುಖ ಕೂಡ ಯಾವಾಗಲೂ ಬದಲಾಯಿಸುತ್ತಿರುವುದು. ಯುವಕ ಸ್ವರ್ಗವನ್ನು ಕಲ್ಪಿಸಿಕೊಂಡರೆ, ಅದರಲ್ಲಿ ಸುಂದರ ಯುವತಿಯಾದ ಹೆಂಡತಿಯನ್ನು ಕಲ್ಪಿಸಿಕೊಳ್ಳುತ್ತಾನೆ. ಇದೇ ಮನುಷ್ಯ ವೃದ್ಧನಾದರೆ ಅವನಿಗೆ ಹೆಂಡತಿಬೇಡ. ನಮ್ಮ ಅವಶ್ಯಕತೆಯೇ ನಮ್ಮ ಸ್ವರ್ಗಕ್ಕೆ ಕಾರಣ. ನಮ್ಮ ಅವಶ್ಯಕತೆ ಬದಲಾಯಿಸಿದಂತೆ ನಮ್ಮ ಸ್ವರ್ಗವೂ ಬದಲಾಯಿಸುವುದು. ಸ್ವರ್ಗ, ನರಕ, ಅವತಾರ ಇವೆಲ್ಲ ಭ್ರಾಂತಿ. ಬಾಹ್ಯ ಸ್ವರ್ಗ ಅಥವಾ ಸತ್ಯಯುಗವಿರುವುದು ಮನುಷ್ಯನ ಭ್ರಾಂತಿಯಲ್ಲಿ.

ಪೂಜಾರಿಗಳು ಮಾತ್ರ ಭರವಸೆ ಕೊಡುತ್ತಾರೆ. ಅವರು ಹೇಳಿದಂತೆ ನಡೆದರೆ, ಅವರ ನಿಂದೆಯನ್ನೆಲ್ಲಾ ಸಾವಧಾನವಾಗಿ ಕೇಳಿದರೆ, ನಮಗೆ ಅವರು ತೋರುವ ದಾರಿಯಲ್ಲಿ ನಡೆದರೆ, ಸಾವು ಕಾಲವಾದ ಮೇಲೆ , ದೇವರನ್ನು ಪ್ರತ್ಯಕ್ಷ ಕಾಣುವಂತೆ ಮಾಡುವ ಒಂದು ಅಪ್ಪಣೆ ಚೀಟಿಯನ್ನು ಕೊಡುತ್ತಾರೆ. ಇಂತಹ ಸ್ವರ್ಗದ ಕಟ್ಟು ಕಥೆಗಳೆಲ್ಲ ಕೆಲಸಕ್ಕೆ ಬಾರದ ಪೂಜಾರಿಯ ಕಲ್ಪನೆಯಲ್ಲದೆ ಮತ್ತೇನು ? ನಿರಾಕಾರ ಭಾವನೆ ಧ್ವಂಸಕಾರಿಯೇನೋ ನಿಜ. ಇದು ಪೂಜಾರಿ, ಚರ್ಚು, ಗುಡಿ ಇವರ ಕೈಯಿಂದ ವ್ಯಾಪಾರವೆಲ್ಲವನ್ನು ಕಸಿದುಕೊಳ್ಳುವುದು. ಭರತಖಂಡದಲ್ಲಿ ಈಗ ಕ್ಷಾಮಗಾಲ. ಆದರೆ ಅಲ್ಲಿ ಕೆಲವುಗುಡಿಗಳಲ್ಲಿ ರಾಜನನ್ನು ಸೆರೆಯಿಂದ ಬಿಡಿಸಿಕೊಳ್ಳುವಷ್ಟು ಬೆಲೆ ಬಾಳುವ ಒಡವೆಗಳಿವೆ ! ಜನರಿಗೆ ಈ ನಿರಾಕಾರ ಬೋಧನೆಯನ್ನು ಪೂಜಾರಿಗಳು ಬೋಧಿಸಿದರೆ, ಅವರ ಕಸುಬಿಗೆ ಆತಂಕ ಬರುವುದು. ಆದರೂ ಕೂಡ ನಾವು ಪೂಜಾರಿಗಳ ಸಂಪರ್ಕವಿಲ್ಲದೆ

ಸ್ವರ್ಗವೆಂಬುದು ನಮ್ಮ ಕಾಮನೆಗಳಿಂದ ಉದಿಸಿದ ಒಂದು ಮೂಢನಂಬಿಕೆ , ಅಷ್ಟೆ. ಹಲವು ಬಗೆಯ ಸ್ವರ್ಗದ ಆದರ್ಶಗಳಲ್ಲೆಲ್ಲಾ ಮನೋದೌರ್ಬಲ್ಯವಿದೆ. ಅನೇಕ ವೇಳೆ ಅರೇಬಿಯಾ ದೇಶದ ಕವನಗಳಲ್ಲಿ, ಸ್ವರ್ಗವನ್ನು ನದಿಗಳು ತುಂಬಿ ಹರಿಯುತ್ತಿರುವ ಸುಂದರ ತೋಟವೆಂದು ಚಿತ್ರಿಸುವರು.

ನಿಸ್ವಾರ್ಥತೆಯಿಂದ ಈ ಭಾವನೆಗಳನ್ನು ಬೋಧಿಸಬೇಕು. ನೀನೂ ದೇವರು ನಾನು ದೇವರು. ಯಾರು ಯಾರ ಆಣತಿಯನ್ನು ಪಾಲಿಸಬೇಕು ? ಯಾರು ಯ್ಯಾರನ್ನು ಪೂಜಿಸಬೇಕು ? ದೇವರ ಅತ್ಯುತ್ತಮ ದೇಗುಲ ನೀನು.ಬೇರಾವ ಗುಡಿಯನ್ನೋ ವಿಗ್ರಹವನ್ನೋ ಗ್ರಂಥವನ್ನೋ ಪೂಜಿಸುವ ಬದಲು ನಾನು ನಿನ್ನನ್ನು ಪೂಜಿಸುತ್ತೇನೆ. ಜೀವಂತವಾಗಿರುವ ದೇವರು ನಿಮ್ಮಲ್ಲಿರುವನು. ಆದರೂ ಕೆಲಸಕ್ಕೆ ಬಾರದ ಕಟ್ಟು ಕಥೆಗಳನ್ನು ನಂಬಿ ಚರ್ಚು, ಗುಡಿ, ಮಸೀದಿ ಇವನ್ನು ಕಟ್ಟುತ್ತಿರುವಿ. ಮಾನವ ದೇಹ ಗುಡಿಗಳಲ್ಲಿ ತಾಜ್ ಮಹಲ್ ಇದ್ದಂತೆ . ಅದರಲ್ಲಿ ನನಗೆ ಪೂಜಿಸಲು ಆಗದೆ ಇದ್ದರೆ ಉಳಿದ ಎಂತಹ ದೇವಸ್ಥಾನಗಳಿಂದಲೂ ಪ್ರಯೋಜನವಿಲ್ಲ.

ನರಕಲೋಕದ ಭಾವನೆ ಕೂಡ ನಾವು ಹುಟ್ಟು ದಗಾಕೋರರು ಎಂಬ ಅದ್ಭುತ ಸತ್ಯವನ್ನು ಸಾರುವುದು. ವೇದದಲ್ಲಿ ನರಕದ ಮಾತೇ ಇಲ್ಲ. ಆನಂತರ ಬಂದ ಪುರಾಣಗಳು ನರಕವಿಲ್ಲದೇ ಇದ್ದರೆ ಉಳಿದ ಎಂತಹ ದೇವಸ್ಥಾನಗಳಿಂದಲೂ ಪ್ರಯೋಜನವಿಲ್ಲ.

ನರಕಲೋಕದ ಭಾವನೆ ಕೂಡ ನಾವು ಹುಟ್ಟು ದಗಾಕೋರರು ಎಂಬ ಅದ್ಭುತ ಸತ್ಯವನ್ನು ಸಾರುವುದು. ವೇದದಲ್ಲಿ ನರಕದ ಮಾತೇ ಇಲ್ಲ. ಆನಂತರ ಬಂದ ಪುರಾಣಗಳು ನರಕವಿಲ್ಲದೇ ಇದ್ದರೆ ಧರ್ಮವೇ ಪೂರ್ಣಗೊಳ್ಳುವುದಿಲ್ಲವೆಂದು ಹಲವು ನರಕ ಲೋಕಗಳನ್ನು ಸೃಷ್ಟಿಸಿದವು.

ಸಮಾಜ ಎಲ್ಲಿಂದ ಬೇಕಾದರೂ ತನ್ನ ಬೆಳವಣಿಗೆಗೆ ವಸ್ತುಗಳನ್ನು ಸಂಗ್ರಹಿಸಬಹುದು. ಆದರೆ ಅದು ತನ್ನ ರೀತಿಯಲ್ಲೇ ಬೆಳೆಯಬೇಕು. ಹೊಸ ಆಚಾರಕ್ಕೆ ಅಂಜುವುದೇ ಮೌಢ್ಯತೆಗೆ ಮೂಲ. ಇದೇ ನರಕಕ್ಕೆ ಹಾದಿ. ಇದರಿಂದಲೇ ಮತಭ್ರಾಂತಿ ಹುಟ್ಟುವುದು. ಸತ್ಯವೇ ಸ್ವರ್ಗ, ಮತಭ್ರಾಂತಿಯೆ ನರಕ.

**ನರಕಲೋಕದ ಭಾವನೆ ಕೂಡ ನಾವು ಹುಟ್ಟು ದಗಾಕೋರರು ಎಂಬ ಅದ್ಭುತ ಸತ್ಯವನ್ನು ಸಾರುವುದು. ವೇದದಲ್ಲಿ ನರಕದ ಮಾತೇ ಇಲ್ಲ. ಆನಂತರ ಬಂದ ಪುರಾಣಗಳು ನರಕವಿಲ್ಲದೇ ಇದ್ದರೆ ಉಳಿದ ಎಂತಹ ದೇವಸ್ಥಾನಗಳಿಂದಲೂ ಪ್ರಯೋಜನವಿಲ್ಲ. ಹೊಸ ಆಚಾರಕ್ಕೆ ಅಂಜುವುದೇ ಮೌಢ್ಯತೆಗೆ ಮೂಲ. ಇದೇ ನರಕಕ್ಕೆ ಹಾದಿ. ಇದರಿಂದಲೇ ಮತಭ್ರಾಂತಿ ಹುಟ್ಟುವುದು. ಸತ್ಯವೇ ಸ್ವರ್ಗ, ಮತಭ್ರಾಂತಿಯೆ ನರಕ.**

# ಕಾಯಕವೇ ಕೈಲಾಸವೆಂದು ತಿಳಿದುಕೊಂಡಿದ್ದ ಶಿವಮ್ಮ ಆಯಿ



ನನಗೆ ನನ್ನ ಬಾಲ್ಯದ ದಿನಗಳು ನೆನಪಾದರೆ ನಮ್ಮ ಮುತ್ಯಾ ಗುರಪ್ಪ ಯಜಮಾನ ಹಾಗೂ ಆಯಿ ಶಿವಮ್ಮ ನೆನಪಾಗುತ್ತಾರೆ. ಮುತ್ಯಾ ಯಾವತ್ತೂ ನಮ್ಮ ಮನೆಯ ಜೇಳಿಂದ್ರದಲ್ಲಿ ಕುಳಿತುಕೊಂಡು ನ್ಯಾಯ -ನಿಬಂಧಿಗಳನ್ನು ಮಾಡುತ್ತ, ಪುಸ್ತಕಗಳನ್ನು ಓದಿಸುತ್ತ ಆ ಪುಸ್ತಕದ ಸಾರವನ್ನು ತನ್ನ ಸುತ್ತ ಮುತ್ತ ಕುಳಿತ ಹತ್ತೆಂಟು ಜನರಿಗೆ ಅದನ್ನು ವಿವರಿಸಿ ಹೇಳುತ್ತಿದ್ದರು.

ಮುಂಜಾನೆ ದೇವರಿಗೆ ಹೂ ಮುಡಿಸುವುದು, ದೀಪ ಹಚ್ಚುವುದಕ್ಕೆ ಜಾಸ್ತಿ ಗಮನ ಕೊಡುತ್ತಿರಲಿಲ್ಲ. ಆದರೆ ದಾಸರಭೀಮಯ್ಯನಿಂದ ನಿತ್ಯ ಕೂಡ್ಲೂರು ಬಸವಲಿಂಗಶರಣರ, ಮುಪ್ಪಿನ ಷಡಕ್ಷರಿಗಳ,ನಿಜಗುಣ ಶಿವಯೋಗಿಗಳ ಹಾಡುಗಳನ್ನು ಕೇಳುವುದು ತಪ್ಪಿಸುತ್ತಿರಲಿಲ್ಲ. ಬದುಕಿನಲ್ಲಿ ನೊಂದು ಬೆಂದು ತನ್ನನ್ನು ಹುಡುಕಿಕೊಂಡು ಬಂದವರಿಗೆಲ್ಲ ಸಾಂತ್ವಾನ ಹೇಳಿ ಮೈದಡವಿ ಕಳಿಸಿಕೊಡುತ್ತಿದ್ದರು.

ಕೆಲವು ಸಲ ಅವರ ಕಷ್ಟಗಳನ್ನು ತನ್ನ ತಲೆಯ ಮೇಲೆ ಹೊತ್ತುಕೊಂಡು ಅವು ತನ್ನವೇ ಎಂಬಂತೆ ಪರಿಹರಿಸಿಕೊಡುತ್ತಿದ್ದರು. ಮನೆಗೆ ಹಸಿವಿನಿಂದ ಬಂದವರಿಗೆಲ್ಲ ಇಲ್ಲಾ ಎನ್ನದೆ ತಾ ಉಣ್ಣುವ ತಾಟಿನಲ್ಲೆ ಅವರಿಗೊಂದಿಷ್ಟು ಉಣಬಡಿಸಿ ಸಂತೋಷ ಪಡುತ್ತಿದ್ದರು.

ಆದರೆ ಇದಕ್ಕೆ ತುಂಬಾ ವ್ಯತಿರಿಕ್ತವಾದ ಬದುಕು, ನನ್ನ ಆಯಿ ಶಿವಮ್ಮನದು. ಈಕೆ ಎಂದೂ ಮನೆಯಲ್ಲಿ ಹಾಯಾಗಿ ಕುಳಿತ್ತದ್ದಂತೂ ನಾನೂ ನೋಡೆ ಇಲ್ಲ. ಮುಂಜಾನೆ ಬೆಳಗಾಗುತ್ತಲೆ ಸಾಕು ದುಡಿತಕ್ಕಾಗಿಯೆ ತಾನು ಹುಟ್ಟಿ ಬಂದಿದ್ದೇನೆ ಎಂಬಂತೆ, ಹೆಂಡಿ ಬಳಿಯುವುದು, ದನಗಳಿಗೆ ಮುಸುರಿ, ಮೇವು ಹಾಕುವುದು, ಕರ ಬಿಟ್ಟುಕೊಳ್ಳುವ ನಂತರ ಮಜ್ಜಿಗೆ ಮಾಡುವ ಕೆಲಸದಲ್ಲಿ ತನ್ನನ್ನು ತೊಡಗಿಸಿಕೊಂಡು ಬಿಡುತ್ತಿದ್ದಳು.

ಬೆಳಗಾಗುತ್ತಲೆ ಯಾರ್‍ಯಾರವೋ ತೋಟಕ್ಕೆ ಹೋಗಿ ಅವರ ತೋಟದಲ್ಲಿಂಯು ಕಾಯಿಪಲ್ಯವನ್ನು ತಂದು, ಅಡಸಲ ಬಡಸಲ ನಾಲ್ಕಾರು ತುತ್ತು ರೊಟ್ಟಿ ಉಂಡು ಸಂತಿಗೆ ಹೋಗುತ್ತಿದ್ದಳು. ಈಗಿನಂತೆ ಆಗ ವಾಹನ ಸೌಕರ್ಯ ಇಲ್ಲದ್ದರಿಂದ ನಾಲ್ಕಾರು ಮಣದಷ್ಟು ಭಾರವಾದ ಕಾಯಿಪಲ್ಯದ ಗಂಟನ್ನು ತಲೆಯ ಮೇಲೆ ಹೊತ್ತು ಸುರಪುರದ ದಿಬ್ಬ ಏರುತ್ತಿದ್ದಳು. ಮಳೆಗಾಲದ ಜಿಟಿ ಜಿಟಿ ಮಳೆಗೆ ಹೇಗೋ ಬೇಸಿಗೆಯ ಬಿರು ಬಿಸುಲಿಗೂ ಮೈಯೊಡ್ಡಿಕೊಂಡು ಹೋಗುತ್ತಿದ್ದಳು.

ಒಂದೇ ದಿನ ರುಕ್ಮಾಪುರ ಸಂತಿ, ರಂಗಂಪೇಟೆ ಸಂತಿಯನ್ನೂ ಮಾಡಿ ಹೈರಾಣಾಗಿ , ನಮಗೆಲ್ಲ ಲಡ್ಡು ತೊಗೊಂಡು ಮನೆಯ ದಾರಿ ಹಿಡಿದು ಸೋತು ಸುಣ್ಣವಾಗಿ ಆಕೆ ಬರುತ್ತಿದ್ದರೆ ನಾನು ಆಕೆಗಾಗಿ ನಮ್ಮೂರ ನಡುವಿನ ಗಡ್ಡೇರಹಳ್ಳದ ಹತ್ತಿರ ಕಾದು ಕುಳಿತಿರುತ್ತಿದೆ. ನಮ್ಮನ್ನು ನೋಡುತ್ತಲೆ ಆಕೆಗೆ ಕೊಂಚ ಗೆಲುವಾಗುತ್ತಿತ್ತು.

ಮನೆಗೆ ಬರುತ್ತಲೆ ಯಥಾ ಪ್ರಕಾರ ಕರಬಿಟ್ಟುಕೊಳ್ಳುವುದು, ಚಹಾ ಮಾಡಿಕೊಳ್ಳುವುದು, ಅಡಿಗೆ ಮಾಡುವುದು ಇದ್ದೇ ಇರುತ್ತಿತ್ತು. ರಾತ್ರಿಯಾಗುತ್ತಲೆ ಹಾಸಿಗೆಗಳೇ ಇಲ್ಲದ ಬಂಡೆಯ ಮೇಲೆ ಉರುಳುತ್ತಲೆ ನಿದ್ರಾದೇವಿಯು ವಶವಾಗುತ್ತಿದ್ದಳು. ಬಹುಶಃ ದುಡಿತವೇ ತನ್ನ ದೇವರು ಎಂದು ತಿಳಿದುಕೊಂಡಿದ್ದಳೋ ಏನೋ

# ನೆನಪು

! ಇದರಿಂದ ಒಂದರೆ ಕ್ಷಣವೂ ಹಿಂದೆ ಸರಿಯುತ್ತಿರಲಿಲ್ಲ. ಎಲ್ಲವನ್ನೂ ಶ್ರದ್ಧೆವಹಿಸಿ ಮಾಡುತ್ತಿದ್ದಳು. ಈಕೆ ಒಮ್ಮೆಯೂ ದೇವರ ಪೂಜೆಯನ್ನು ಮಾಡಿದ್ದು ನಾನಂತೂ ನೋಡೇ ಇಲ್ಲ. ಯಾವ ದೇವರಿಗೂ ಹರಕೆ ಹೊತ್ತದ್ದಾಗಲಿ ಮುಡಿಪು ಕಟ್ಟಿದ್ದಾಗಲಿ ನನಗಂತೂ ಗೊತ್ತಿಲ್ಲ.

ಯಾರದೋ ಒತ್ತಾಯಕ್ಕೆ ಒಂದೆ ಒಂದು ಸಲ ಮಾತ್ರ ಹಲಕರಟಿಯ ವೀರಭದ್ರ ದೇವಸ್ಥಾನಕ್ಕೆ ಹೋಗಿದ್ದಳಂತೆ. ಮನೆಗೆ ಬರುತ್ತಲೆ ನಾಲ್ಕಾರು ದಿನಗಳ ಹಿಂದೆ ಹುಟ್ಟಿದ್ದ ಎಮ್ಮೆ ಕರು ಸತ್ತು ಹೋಗಿತ್ತಂತೆ !! ಇದನ್ನು ಕಂಡು ಆಕೆಗೆ ಏನ್ನನ್ನಿಸಿತೋ ಏನೋ, ಅಂದಿನಿಂದ ಹಲಕರಟಿ ವೀರಭದ್ರ ದೇವಸ್ಥಾನಕ್ಕೆ ಹೋಗುವುದಾಗಲಿ, ಆತನನ್ನು ನೆನೆಯುವುದಾಗಲಿ ಮಾಡಲೆ ಇಲ್ಲ. ಅಮವಾಸೆ – ಹುಣ್ಣಿವೆ ದಿನಗಳಲ್ಲಿ ಆಗ ಪ್ರತಿ ಮನೆಯಲ್ಲಿ ಐನೋರನ್ನು ಕರೆದು ಮೊದಲು ಅವರಿಗೆ ಊಟಕ್ಕೆ ಕೂಡಿಸುವುದು ವಾಡಿಕೆ , ಆದರೆ ಆಯಿ ಶಿವಮ್ಮ ಮಾತ್ರ ಅದನ್ನು ಅಷ್ಟು ಸೀರಿಯಸ್ಸಾಗಿ ಮಾಡಿಕೊಂಡು ಬರಲಿಲ್ಲ. ಆಯಿ ನೀ ಹಿಂಗ್ಯಾಕ ಅಂತ ಕೇಳಿದರ

**ಜಂಗಮರ ಹುಡುಗನ ಹೆಂಗ ಸಲುವಲಿ ಶಿವನ**
**ಜಂಗಬೇಕವನ ಕಾಲಿಗೆ ; ದುಡ್ಡಿನ**
**ಲಿಂಗಬೇಕವನ ಕೊರಳಿಗೆ**

ಎಂದು ಜಂಗಮರ ಆಸೆ ಬುರುಕತನವನ್ನು ಹೇಳಿ , ತಾನು ಅವರನ್ನು ಈ ಕಾರಣಕ್ಕೆ ಅಷ್ಟಕ್ಕಷ್ಟೆ ಹಚ್ಚಿಕೊಂಡಿದ್ದೇನಂತ ಹೇಳುತ್ತಿದ್ದಳು.

ಕೆಲಸ ಮಾಡದ ಯಾರನ್ನೂ ಆಕೆ ಸೇರುತ್ತಿರಲಿಲ್ಲ. ಸ್ವತಃ ತನ್ನ ಒಡ ಹುಟ್ಟಿದ ಅಣ್ಣ – ತಂಗಿಯರನ್ನೂ ತನ್ನ ಸಮೀಪ ಬಿಟ್ಟುಕೊಳ್ಳುತ್ತಿರಲಿಲ್ಲ. "ಕಳ್ಳರನ್ನ ನಂಬಬೇಕಂತ, ಮೈಗಳ್ಳರನ್ನ ನಂಬಬಾರದು" ಎಂಬುದು ಆಕೆ ನಂಬಿಕೊಂಡು ಬಂದ ಸತ್ಯವಾಗಿತ್ತು.

ಆಯಿ ಮಜ್ಜಿಗೆ ಮಾಡುವಾಗ ನಾನೇ ಕುತೂಹಲದಿಂದ ನಿನಗ್ಯಾವರ ಪದ ಬರತಾವೇನ ಹೇಳ..... ನಾ ಬರಕೋತಿನಿ ಅಂದಾಗಲೆಲ್ಲ, ಹೇಳುತ್ತಿದ್ದಳು. ಬಹುಶಃ ಅವೆಲ್ಲ ಆಕೆಯ ಸ್ವಾನುಭಾವನ ಹಾಡು ಆಗಿರಲೂ ಬಹುದೆನಿಸುತ್ತದೆ.

**ಹೆಂಡಡಗಿ ಹೊರಲಾಕ ಬಡವರ ಮಗಳಲ್ಲ**
**ಗಡಿನಾಳ ನನ್ನ ತವರಿಗೆ ಹೇಳಿ ಕಳಿಸಿದ**
**ಗಳಿಗ್ಯಾಗ ಆಳ ಕಳಿಸ್ಯಾರ**

ಎಂದು ತನ್ನ ತವರು ಮನೆಯ ಸಿರಿವಂತಿಕೆಯನ್ನು ಹೇಳುತ್ತಿದ್ದಳು. ಆದರೆ ಆಕೆ ತನಗೆ ಕೊಟ್ಟ ಮನೆಗೆ ತಕ್ಕಂತೆ ಬದುಕಿದಳೆ ಹೊರತು, ತನ್ನ ತವರು ಮನೆಯ ಹೆಗ್ಗಳಿಕೆಯಿಂದಲ್ಲ.

ತನಗೆ ಸಂಬಂಧವಿಲ್ಲದವರ ಕೂಡ ಜಗಳು – ಜೂಟಿ ಎಂದೂ ಆಡಿದವಳೆ ಅಲ್ಲ.

**ಹಾದಿಯ ಜಗಳಕ್ಕ ಹಣಿಕೊಟ್ಟು ನಿಂತಿದ್ದಿ**
**ನಿನಗಂದಿಲ್ಹೋಗ ಐವಾನಿ**
**ಎಲಿಗಂದಿನೋಗ ಬೆಲಿಗೇಡಿ**

ಅಲ್ಲಿಂದ ಸರಿದು ಬರುತ್ತಿದ್ದಳು.

**ಶರಣರ ನೆನದಾರ ಸರಗೀಯ ಇಟ್ಟ್ಯಾಂಗ**
**ಹರಳಮಲ್ಲಿಗಿ ಮುಡದ್ಹಾಂಗ ಕಲ್ಯಾಣ**
**ಶರಣರ ನೆನಿಯೇ ಎನಮನವೆ**

ಎಂದು ಬಾಯಲ್ಲಿ ಹೇಳುತ್ತಿದ್ದಳಾದರೂ ಒಂದು ದಿನವೂ ಯಾವ ಶರಣರನ್ನು ನೆನೆಯಲಿಲ್ಲ. ನೆನೆಯಲು ಆಕೆಗೆ ಪುರಸೊತ್ತೇ ಇರಲಿಲ್ಲ. ಆದರೆ ಶರಣರ ಬಹು ಮಹತ್ವದ ಆಶಯವಾದ ಕಾಯಕವೇ ಕೈಲಾಸ ಎಂಬ ಮಾತನ್ನು ತನ್ನ ಕೊನೆ ಜೀವ ಇರುವವರೆಗೂ ನಡೆಸಿಕೊಂಡು ಬಂದಳು.ಕಾಯಕದಲ್ಲಿ ನಿರತವಾದಾಗ ಜಂಗಮ ಮುಂದಿದ್ದರೂ ಹಂಗು ಹರಿಯಬೇಕು ಎಂಬ ಮಾತಿಗೆ ಆಯಿ ಶಿವಮ್ಮ ಸಾಕ್ಷಿಯಾಗಿ ಬದುಕಿದಳು.

**ನೀಲ ಆದ ಬಳಿಕ ಎಲ್ಲಿ ಎಲ್ಲಿ ಇಲ್ಲ**
**ನಮ್ಮವ್ವನಂತ ಗರತಿಲ್ಲ ಗರತಿಹೊಟ್ಟಲುಟ್ಟಿ**
**ಗರವಿನ ಮಾತು ನಮಗಿಲ್ಲ**

ಎಂದೆಲ್ಲ ಹೇಳುತ್ತ ಈ ಲೋಕದಿಂದ ಶಿವಮ್ಮ ಆಯಿ ಸರಿದು ಹೋಗಿ

ಇದೇ ಜುಲೈ ೨೫ ಕ್ಕೆ ಎರಡು ವರ್ಷವಾಯಿತು.

ಆಕೆಯ ನೆನಪಾಗಿ ಇದೆಲ್ಲ ಬರೆದೆ.

೦ ವಿಶ್ವಾರಾಧ್ಯ ಸತ್ಯಂಪೇಟೆ

# ಹಳೆಯ ಕೋಟು ತೊಡು ಹೊಸ ಪುಸ್ತಕ ಓದು



ಕನ್ನಡ ನಾಡು ಕಂಡ ಅಪರೂಪದ ಬರಹಗಾರರಲ್ಲಿ ದಿ. ಡಾ.ಹಾರೋಗದ್ದೆ ಮಾನಪ್ಪ ನಾಯಕ ಅವರೂ ಒಬ್ಬರು. ಅವರು ಜೀವಿಸಿರುವವರೆಗೂ ಬರೆದೇ ಬದುಕಿದರು.

ಬರವಣಿಗೆ ಮತ್ತು ಓದು ಅವರನ್ನು ಪರಿಪೂರ್ಣ ಮನುಷ್ಯನನ್ನಾಗಿ ಮಾಡಿತ್ತು. ಸಾಮಾಜಿಕವಾಗಿ ಎತ್ತರಕ್ಕೆ ಏರಿದರೂ ಏರಿದವನು ಚಿಕ್ಕವನಾಗಿರಬೇಕು ಎಂಬ ಮಾತಿಗೆ ಉದಾಹರಣೆಯಾಗಿದ್ದರು.

ಪುಸ್ತಕಗಳ ಓದಿನ ಪ್ರೀತಿ ಅವರಿಗೆ ಎಷ್ಟಿತ್ತೆಂದರೆ ತಾವು ವಾಸಿಸುತ್ತಿದ್ದ ಮನೆಯ ೭ ಕೋಣೆಗಳ ತುಂಬೆಲ್ಲ ಬರೀ ಪುಸ್ತಕಗಳು ಮತ್ತು ಪುಸ್ತಗಳು ಮಾತ್ರ ಅಲಂಕರಿಸಿದ್ದವು.

ಅವರ ಅಪರೂಪದ ಬರವಣಿಗೆಯೊಂದನ್ನು ನಮ್ಮ ಓದುಗರಿಗಾಗಿ ಇಲ್ಲಿ ಕೊಡಮಾಡಲಾಗಿದೆ. – ಸಂಪಾದಕರು

ಹಳೆಯ ಕೋಟನ್ನು ತೊಡು ; ಹೊಸ ಪುಸ್ತಕ ಓದು ಎನ್ನುವುದು ಇಂಗ್ಲೀಷಿನ ಒಂದು ಸೂಕ್ತಿ. ಉಡುಗೆ ತೊಡುಗೆಗಳಿಗೆ ಅಷ್ಟಾಗಿ ಗಮನ ಕೊಡದಿದ್ದರೂ ಚಿಂತೆಯಿಲ್ಲ, ಪುಸ್ತಕಗಳನ್ನು ಕೊಳ್ಳಬೇಕು, ಓದಬೇಕು, ಜ್ಞಾನದಿಗಂತವನ್ನು ವಿಸ್ತರಿಸಿಕೊಳ್ಳಬೇಕು ಎಂದು ಈ ಸೂಕ್ತಿ ಹೇಳುತ್ತದೆ.

ನಮ್ಮಲ್ಲಿ ಓದುಬರಹ ಬಲ್ಲವರು ಬಹು ಕಡಿಮೆ, ಬಲ್ಲವರೂ ಅದನ್ನು ತಮ್ಮ ದೈನಂದಿನ ವ್ಯವಹಾರಕ್ಕಾಗಿ ಮಾತ್ರ ಬಳಸುತ್ತಾರೆ. ಜ್ಞಾನಾರ್ಜನೆಗೆ ಬಳಸುವವರು ವಿರಳ.

ಅನೇಕರು ಪತ್ರಿಕೆಗಳನ್ನು ಓದುತ್ತಾರೆ ; ಜೊತೆಗೆ ತಮ್ಮ ತಮ್ಮ ಅಭಿರುಚಿಗಳಿಗೆ ತಕ್ಕಂತೆ ಕೆಲವರು ನಿಯತಕಾಲಿಕಗಳನ್ನೂ ಓದಬಹುದು. ಪುಸ್ತಕಗಳನ್ನು ಕೊಳ್ಳುವವರ ಸಂಖ್ಯೆ ಬೆರಳಲ್ಲಿ ಎಣಿಸುವಷ್ಟು ಮಾತ್ರ.

ಓದನ್ನೇ ಬಂಡವಾಳವನ್ನಾಗಿಸಿಕೊಂಡ ವಿದ್ಯಾರ್ಥಿಗಳಾಗಲಿ, ಅಧ್ಯಾಪಕರಾಗಲಿ ಓದಿಗೆ ತಾವು ಕೊಡಬೇಕಾದ ಮಹತ್ವವನ್ನು ಕೊಡುವುದಿಲ್ಲ. ಅಗತ್ಯಬಿದ್ದಾಗಷ್ಟೆ ಪುಸ್ತಕ ಭಂಡಾರಗಳಿಗೆ ಹೋಗುತ್ತಾರೆ ; ಪುಸ್ತಕಗಳನ್ನು ಎರಡವಲು ಪಡೆಯುತ್ತಾರೆ. ಪುಸ್ತಕಗಳನ್ನು ಕೊಳ್ಳುವುದು, ಮನೆಯಲ್ಲೊಂದು ಪುಸ್ತಕ ಭಂಡಾರ ಬೆಳೆಸುವುದು ಬಹು ಜನರಿಗೆ ಬೇಕಾಗಿಲ್ಲ. ಕಥೆ ಪುಸ್ತಕಗಳನ್ನು ಎಲ್ಲಿಂದಲಾದರೂ ತಂದು ಒಮ್ಮೆ ಓದಿ ಮುಗಿಸಬಹುದೆಂದು ಸಾಮಾನ್ಯವಾಗಿ ಒಂದು ತಿಳಿವಳಿಕೆ. ಅವರಿಗೆ ಪುಸ್ತಕಕೊಳ್ಳುವುದು ದುಬಾರಿ ಹವ್ಯಾಸ ; ವ್ಯರ್ಥವಿಲಾಸ. ಒಳ್ಳೆಯ ಊಟ, ಒಳ್ಳೆಯ ಉಡುಗೆಗಳಿಗೆ ಒಳ್ಳೆಯ ಪುಸ್ತಕಗಳನ್ನು ಹೋಲಿಸಲು ಬರುವುದಿಲ್ಲ. ನಮಗೆ ಹಲವು ಹನ್ನೊಂದು ಬಗೆಯ ಶೋಕಿ ಬೇಕು; ಆದರೆ ಪುಸ್ತಕದ ಶೋಕಿ ಬೇಡ.

ಪುಸ್ತಕಗಳು ನಮ್ಮಲ್ಲಿ ಇನ್ನೂ ಸಾಮಾಜಿಕ ಸ್ಥಾನಮಾನದ ಸಂಕೇತ ಎನಿಸಿಲ್ಲ; ಶ್ರೀಮಂತಿಕೆಯ ದ್ಯೋತಕವಾಗಿಲ್ಲ. ಮಧ್ಯಮ ವರ್ಗದ ಜನರಾಗಲಿ ಶ್ರೀಮಂತರಾಗಲಿ ಪುಸ್ತಕಗಳನ್ನು

ಕೊಳ್ಳುವ ಶಕ್ತಿ ಉಳ್ಳವರು ; ಆದರೆ ಕೊಳ್ಳಲಾರರು. ಅವರ ನಡು ಮನೆಯಲ್ಲಿ ನೋಡಿ - ಬಗೆಬಗೆಯ ಚಿತ್ರಗಳು, ಕಲಾವಸ್ತುಗಳು, ರೇಡಿಯೋ, ಸ್ಟೀರಿಯೋ, ಟೆಲಿವಿಷನ್, ಫ್ಯಾನ್‌ಗಳು, ರೆಫ್ರಿಜಿರೇಟರು, ಸ್ಕೂಟರು, ಕಾರುಗಳೂ ಅವರ ಬಳಿ ಇವೆ - ಒಂದೆ ? ಎರಡೆ ? ಒಂದೊಂದೂ ಹೆಚ್ಚುತ್ತಾ ಹೋದಂತೆ ಶ್ರೀಮಂತಿಕೆಯೂ ಬೆಳೆಯುತ್ತಾ ಹೋಗುತ್ತಿದೆ ಎಂದು ಅರ್ಥ.

ಆದರೆ ಈ ಏಣಿಯಲ್ಲಿ ಪುಸ್ತಕಗಳ ಮೆಟ್ಟಲಿಲ್ಲ. ಈ ಜನರು ವಾರಕ್ಕೆರಡು ಸಿನಿಮಾ ನೋಡಬೇಕು. ತಿಂಗಳಿಗೊಂದು ಪುಸ್ತಕಕೊಳ್ಳಲಾರರು. ತಮ್ಮ ಕಾರು ರೆಫ್ರಿಜಿರೇಟರುಗಳನ್ನು ಮನೆಗೆ ಬಂದ ಅತಿಥಿಗಳಿಗೆ ತೋರಿಸಿ ಮೈಯುಬ್ಬುವವರಂತೆ , ಪುಸ್ತಕಗಳ ಸಂಗ್ರಹ ತೋರಿಸಿ ಸಂತೋಷ ಪಡುವವರನ್ನು ನಾವು ಇನ್ನೂ ನಮ್ಮ ಸಮಾಜದಲ್ಲಿ ನೋಡಬೇಕಾಗಿದೆ.

ಪುಸ್ತಕದ ಗೀಳು ಇರುವ ಮನುಷ್ಯ ವ್ಯವಹಾರಿಯಲ್ಲ ಎಂದೇ ಹಲವರು ಭಾವಿಸುತ್ತಾರೆ; ಪುಸ್ತಕಕೊಂಡು ಹಣ ಹಾಳುಮಾಡಿಕೊಳ್ಳುತ್ತಾನೆಂದು ವಿಷಾದಿಸುತ್ತಾರೆ. ನಮ್ಮ ನಾಗರಿಕತೆ ಭೌತಿಕವಾಗಿ ಬೆಳೆದ ಹಾಗೆ ಸಾಂಸ್ಕೃತಿಕವಾಗಿ, ಮಾನಸಿಕವಾಗಿ ಸಾಂಘಿಕವಾಗಿ ಬೆಳೆದಿಲ್ಲ. ಒಂದು ಸಮಾಜ ಎಷ್ಟರಮಟ್ಟಿಗೆ ಈ ದಿಕ್ಕಿನಲ್ಲಿ ಬೆಳೆದಿದೆ ಎಂಬುದನ್ನು ಅಳೆಯಬೇಕಾದರೆ ಅದರ ಸದಸ್ಯರ ವಾಚನಾಭಿರುಚಿ, ಪುಸ್ತಕ ಹವ್ಯಾಸಗಳನ್ನು ನೋಡಬೇಕು.

ಪುಸ್ತಕಗಳು ನಮ್ಮ ಬದುಕಿನ ಅವಿಭಾಜ್ಯ ಅಂಗಗಳಾಗದೆ ಹೋದರೆ ನಾವು ಕಲಿತಿದ್ದಕ್ಕೆಲ್ಲ ಬೆಲೆ ಇಲ್ಲವಾಗುತ್ತದೆ. ಕಲಿತಿದ್ದು ಬೆಳೆಯಬೇಕು. ಅದಕ್ಕೆ ಪೋಷಣೆ ಪುಸ್ತಕಗಳಿಂದ. ಸಾರ್ಥಕವಾಗಿ ಸಮಯ ಕಳೆಯಲು ಪುಸ್ತಕಗಳಿಗಿಂತ ಬೇರೆ ಸಂಗಾತಿಗಳು ಯಾರು ಸಿಕ್ಕುತ್ತಾರೆ ? ಹೊತ್ತು ಹೋಗುವುದೆನಗೆ ಸತ್ತವರ ಸಂಗದಲಿ ಎಂಬುದು ಕವಿಯ ಮಾತು. ಶತಮಾನಗಳ ಹಿಂದೆ ಆಗಿ ಹೋದ ಮಹಾಚೇತನಗಳ ಗೆಳೆತನ ನಮಗೆ ಉಂಟಾಗುವುದು ಹೇಗೆ ? ಲೋಕದ ಯಾವುದೋ ಮೂಲೆಯ ಜ್ಞಾನಾನುಭವ ನಮ್ಮ ಬಳಕೆಗೆ ಬರುವುದು ಹೇಗೆ ? ಕಾಲ ದೇಶಗಳ ಕಟ್ಟನ್ನು ವಿಸ್ತಾರಗೊಳಿಸುತ್ತವೆ ; ಆಲೋಚನೆಗಳನ್ನು ಒರೆಗೆ ಹಚ್ಚುತ್ತವೆ. ಜ್ಞಾನವೆ ? ಮನರಂಜನೆಯೆ ? ಆಧ್ಯಾತ್ಮವೆ ? ಯಾವುದು ಬೇಕು ನಿಮಗೆ ? ಅವೆಲ್ಲ ಪುಸ್ತಕಗ[illegible] ನಿಮ್ಮಲ್ಲಿಗೆ ಬರುತ್ತವೆ. ಆದರೂ ನಮ್ಮ ಜನ ಒಲವು ಪುಸ್ತಕಗಳ ಕಡೆ ಹರಿದಿಲ್ಲ. ಪಠ[illegible]ಗ[illegible] ಬಿಟ್ಟು ಬೇರೆ ಪುಸ್ತಕ ಓದುವವರಿಲ್ಲ. ಕೊನೆಗೆ ಪಠ್ಯ ಪುಸ್ತಕಗಳನ್ನಾದರೂ ಓದಿದ್ದಾರೆ[illegible] ಇಲ್ಲ.

ಪುಸ್ತಕಗಳ ಬಗೆಗೆ ನಮ್ಮ ತಾತ್ಸಾರ ನಮ್ಮ ರಾಷ್ಟ್ರೀಯ ದೌರ್ಬಲ್ಯ. ಶ್ರೀಮಂತ[illegible] ಶ್ರೀಮಂತರಾಗಿದ್ದಾರೆಂಬುದನ್ನು ತೋರಿಸಲು, ನಾಗರಿಕರು ಸಂಸ್ಕೃತಿವಿಹೀನರಲ್ಲ ಎಂ[illegible]ನ್ನು ದೃಢಪಡಿಸಲು, ವಿದ್ಯಾವಂತರು ಕೇವಲ ಅಕ್ಷರಸ್ಥರಲ್ಲ ಎಂಬುದನ್ನು ರುಜುವಾತುಗೊಳಿಸಲು ಒಳ್ಳೆಯ ಪುಸ್ತಕಗಳು ರಾಶಿ ರಾಶಿ ಅವರ ನಡುಮನೆಯನ್ನು ತುಂಬಬೇಕು. ಪುಸ್ತಕಗಳೂ ಸಂಪತ್ತು ಎಂಬ ಭಾವನೆ ಅವರಲ್ಲಿ ಬೆಳೆಯಬೇಕು.

### ಹಿಮ್ಮಡಿ ಒಡೆತಕ್ಕೆ ಮದ್ದು

ಪ್ರತಿದಿನ ರಾತ್ರಿ ಮಲಗುವ ಮುನ್ನ ಕಾಲನ್ನು ಸ್ವಚ್ಛವಾಗಿ ತೊಳೆದು ಚೆನ್ನಾಗಿ ಒರೆಸಿಕೊಳ್ಳಬೇಕು. ಕಾಲಿನಲ್ಲಿ ನೀರಿನ ತೇವ ಉಳಿಯಬಾರದು. ಆಮೇಲೆ ಕೊಬ್ಬರಿ ಎಣ್ಣೆಯನ್ನು ಇಡೀ ಪಾದಕ್ಕೆ ಹಚ್ಚಿಕೊಂಡು ಗಾಳಿಯಾಡದಂತೆ ಪ್ಲಾಸ್ಟಿಕ್ ಚೀಲವನ್ನು ಸುತ್ತಿಕೊಳ್ಳಬೇಕು. ಬೆಳಿಗ್ಗೆ ಎದ್ದಾಗ ಪಾದವೆಲ್ಲ ಮೆತ್ತಗಾದ ಅನುಭವವಾಗುತ್ತದೆ. ಹೀಗೇ ೮ ರಿಂದ ೧೫ ದಿನ ಮಾಡಬೇಕು.



# ಹಸನ್ಮುಖಿ ಮನಸ್ಸಿನ ಗದುಗಿನ ಸಿದ್ಧಲಿಂಗ ಶ್ರೀಗಳು

**ಶ್ರೀಮತಿ ಭಾರತಿ ಮೋಹನಕೋಟೆ**

ಗದುಗಿನ ಶ್ರೀ ತೋಂಟದ ಸಿದ್ಧಲಿಂಗಸ್ವಾಮಿಯವರು ಮಠಕ್ಕೆ ಪಟ್ಟಕ್ಕಾದ ಸಂದರ್ಭದಾಗ ಅಪ್ಪನೂ(ಶಾಂತರಸ) ಬಂದು ಸಮಾರಂಭದಾಗ ಭಾಗವಹಿಸಿ ಭಾಷಣ ಮಾಡಿದ್ದ.ಅದನ್ನೆಲ್ಲ ನಮಗ ಹೇಳಿದ್ದ. ಆದರ ನನಗ ಆಗ ಸ್ವಾಮೀಜಿಯವರ ದರುಶನ ಭಾಗ್ಯ ಲಭಿಸಿದ್ದಿಲ್ಲ. ಅಲ್ದ ಮುಂದ ನನ್ನ ಭಾವೀ ಜೀವನವನ್ನೆಲ್ಲ ಈ ಊರಿನ್ಯಾಗ ಕಳಿತೀನಿ ಅನ್ನುವ ಕಲ್ಪನಾನೂ ಇದ್ದಿದ್ದಿಲ್ಲ. ಈ ಊರಿಗೆ ಬಂದು ಇರಾಕತ್ತಿಂದನೂ ಸ್ವಾಮೀಜಿಯವರ ಭೇಟಿಯಾಗುವ ಸಂದರ್ಭ ಬಂದಿದ್ದಿಲ್ಲ. ಮಠಕ ಹೋಗಿ ಅಲ್ಲೇ ಕೈ ಮುಗಿದು ಆವರಣದಾಗ ಕುಂಟು ಬರತಿದ್ದೆ. ಒಮ್ಮೆ ಅಪ್ಪ ಮಠದ ಲಿಂಗಾಯತ ಪುಣ್ಯ ಪುರುಷ ಸಾಹಿತ್ಯರತ್ನ ಮಾಲೆಗಾಗಿ ಕಲ್ಬುರ್ಗಿಯ ದೊಡ್ಡಪ್ಪ ಅಪ್ಪ ಅವರನ್ನು ಕುರಿತ ಪುಸ್ತಕ ಬರೆಯೂ ಸಂದರ್ಭದಾಗ ಯಾವುದೋ ಕಾಗದ ಪತ್ರ ಮಾಹಿತಿ ಸ್ವಾಮೀಜಿಯವರಿಗೆ ತಲುಪಿಸು ಅಂತ ನನಗೇ ಕಳಿಸಿದ.ನಾನು ಅಂಜುತ್ತ ಅಳುಕುತಲೇ ಮಠಕ್ಕೆ ಹೋಗಿ ಶ್ರೀಗಳನ್ನು ಭೇಟಿಯಾಗೋದದ ಹಿಂಗಿಂಗ ಕೆಲಸ ಅಂತ ತಿಳಿಸಿದಾಗ ಸಿಬ್ಬಂದಿ ಸ್ವಾಮೀಜಿಯವರನ್ನು ಭೇಟಿಯಾಗಲಿಕ್ಕೆ ಅನುವು ಮಾಡಿಕೊಟ್ಟರು. ಪೂಜ್ಯರನ್ನು ಕುರಿತು ಭಾಳ ಕೇಳಿದ್ದ ನನಗ ಅಂದು ಅವರ ದರುಶನ ಭಾಗ್ಯ ಲಭಿಸಿತ್ತು.

ಸ್ವಾಮೀಜಿಯವರನ್ನು ನೋಡಿದ ಕೂಡ್ಲೇ ತವರಿನ ಮಮತಾ ಈ ಮಠದೊಳಗ ಐತಿ ಅಂತ ಖಾತ್ರಿ ಅನಿಸಿಬಿಟ್ತು. ಅವತ್ತು ಸ್ವಾಮೀಜಿ ನನ್ನ ವಿದ್ಯಾಭ್ಯಾಸ, ಆಸಕ್ತಿ, ಹವ್ಯಾಸ ಎಲ್ಲಾ ವಿಚಾರಿಸಿಕೊಂಡರು.

ಈ ಸಂದರ್ಭದಾಗ ಇನ್ನೊಂದು ಘಟನಾ ನೆನಪಾಗತೈತಿ ಅಮ್ಮನಿಗೆ ಕ್ಯಾನ್ಸರ್ ಆಗಿ ಕೊನೆ ಹಂತದೊಳಗ ಇಲ್ಲೇ ನಮ್ಮ ಮನ್ಯಾಗ ಇದ್ಲು. ನಾನು ಸ್ವಾಮೀಜಿಯವರ ದರುಶನಾ ಮಾಡಬೇಕಂತೀನಿ ಅವರು ಮನಿಗಿ ಬರ್ತಾರೇನು ? ಅಂತ ಕೇಳಿದಳು ಅಮ್ಮ. ಆಕಿ ಆವಾಗ ಹೊರಗ ತಿರುಗ್ಯಾಡೂ ಸ್ಥಿತಿಯೊಳಗ ಇದ್ದಿದ್ದಿಲ್ಲ. ನಾನು ಮಠಕ್ಕ ಹೋಗಿ ಹಿಂಗ ಅಮ್ಮ ತಮ್ಮ ದರುಶನಾ ಪಡೀಬೇಕಂತಾಳ ಅಂತ ಹೇಳಿದೆ. ಬಂದಬಿಟ್ರು. ಅಮ್ಮ ಅವರೆದುರು ಕುಂತು ಮಾತಾಡಿ ಅಪ್ಪಾ ಅವರ, ನಾ ಸಾವಿಗಿ ಅಂಜಿಲ್ಲ. ಆದ್ರ ನೋವಿಗಿ ಅಂಜೀನಿ ನನಗ ನೋವಿಲ್ದ ಸಾವ ಕರುಣಿಸು ಅಂತ ಬೇಡಕೋತೀನಿ. ಎಲ್ಲಾರು ಸತ್ತಮ್ಯಾಲೆ ಸ್ವಾಮಿಗಳ ಪಾದ ತಲಿ ಮ್ಯಾಲ ಇಡಸ್ಕೋತಾರ. ಸತ್ತಮ್ಯಾಲ ನಮಗೇನು ಗೊತ್ತಾಗತೈತಿ ? ಅದಕ ಈಗ ಬದುಕಿವ್ದಾಗ ನೀವು ಪಾದ ನನ್ನ ತಲಿಮ್ಯಾಲೆ ಇಟ್ಟಬಿಡ್ರಿ

ಅಂತ ಕೇಳಕೊಂಡ್ಲು ಸ್ವಾಮೀಜಿ ಅಮ್ಮನ ಮಾತಿಗಿ ನಕ್ಕು

ಅಲ್ಲವಾ ಪಾದಾ ಯಾಕ ? ಇಗಾ ತೆಲಿ ಮ್ಯಾಲ ಹಸ್ತಾ ಇಡ್ತೀನಿ. ಅಲ್ದ ಇವತ್ತಿನಿಂದ ನಾ ಪೂಜಾ ಮಾಡ್ಕೊಳ್ಳೂ ಮುಂದ ಲಿಂಗಯ್ಯಗ ಒಂದು ದಳಾ ಪತ್ರಿ ನಿನ್ನ ಹೆರಿಲಿ ಏರಿಸಿ ಈ ತಾಯಿಗೆ ನೋವಿಲ್ದ ಸಾವು ಕೊಡಪಾ ಅಂತ ಬೇಡಕೋತೀನಿ ಆತಿಲ್ಲ ? ಅಂತ ಅಭಯ ನುಡಿದು ಕಲ್ಲಸಕ್ಕರಿ,ಗೋಡಂಬಿ,ದ್ರಾಕ್ಷಿ ಪ್ರಸಾದ ಕೊಟ್ಟು ಇವೆಲ್ಲಾ ವಿಟ್ಯಾಮಿನ್ ಇದ್ದಂಗ. ಪ್ರಸಾದದ ಹೆಸಿಲೆ ತಿನಬೇಕವಾ ಅಂತ ಹಡದ ತಂದಿ ತಾಯಿ ಹೇಳೂ ಕಳ್ಳಿನ ಕಾಳಜಿ ಮಾತು ಹೇಳಿದ್ರು. ಸ್ವಾಮೀಜಿಯವರ ಕಳಕಳಿಯ ಮಾತಿಗೆ ಲಿಂಗಯ್ಯನೂ ಕರಗಿ ತಲೆಬಾಗಿದ ಅಂತ ಕಾಣ್ತದ. ಅಮ್ಮ ಬಯಸಿದಂಗ ಅಂಥಾ ಜಡ್ಡಿದ್ರೂ ನೋವಿಲ್ದ ಸಾವು ಬಂದು ಯಾವ ರೀತಿನೂ ನರಳದ ಅಮ್ಮ ಶಾಂತ ಆದಳು.

ಅಷ್ಟ ಅಲ್ಲ, ಅಮ್ಮನ ಸಾವಿನ ಸುದ್ದಿ ನಾ ಮಠಕ್ಕ ಹೋಗಿ ಅಪ್ಪಗೋಳಿಗೆ ತಿಳಿಸಿ ಬಂದೆ. ಅಂದ ಅವರು ಬ್ಯಾರೆ ಊರಿಗೆ ಹೊಂಟಿದ್ರು. ಕಾರ್ಯಕ್ರಮ ಮುಗಿಸಿಕೊಂಡು ರಾತ್ರಿ ೧೦ ಕ್ಕ ವಾಪಸ ಬಂದವರ ಮನಿಗೆ ಬಂದ್ರು. ಅಪ್ಪಗ, ನನಗ, ನಮ್ಮ ಕುಟುಂಬಕ್ಕ ಎಲ್ಲಾರಿಗೂ ಧೈರ್ಯದ ಸಾಂತ್ವನದ ಮಾತು ಹೇಳಿ ನಮ್ಮ ದುಃಖಾ ಹಗರ ಮಾಡಿದರು. ಇಷ್ಟು ಕಳಕಳಿ, ಆತ್ಮೀಯತಾ, ಮಮತಾಮಯಿ ಸ್ವಾಮೀಜಿ ಈಗಿನ ದಿನಮಾನದಾಗೂ ಅದಾರ ಎಂಬುದೆ ನಮಗೊಂದು ಹೆಮ್ಮೆ.

ಆವತ್ತಿನಿಂದ ಇವತ್ತಿನ ತನಕಾ ನನ್ನ ಬದುಕಿನ, ಸಂತೋಷ,ನೋವು,ನಲಿವು ದುಃಖ ದುಗುಡದ ಎಲ್ಲಾ ಕ್ಷಣಗಳಳೊಳಗನೂ ಸ್ವಾಮೀಜಿಯವರನ್ನ ಕಂಡೀನಿ, ಕಾಣ್ತೇನಿ. ಶ್ರೀಗಳು ಅದ ಹಸನ್ಮುಖ, ಶಾಂತ ಮನಸ್ಸನಿಂದ ಆಗದೀ ಖಚಿತ ಸ್ವರದಾಗ ಹುರುಪು ಕೊಡ್ತಾರ, ಪ್ರೋತ್ಸಾಹಿಸತಾರ, ಸಾಂತ್ವನ ಹೇಳ್ತಾರ. ಗುರು,ತಾಯಿ, ಮಾರ್ಗದರ್ಶಿ ಎಲ್ಲಾ ಆಗ್ಯಾರ.

ಅಲ್ಲವಾ ಪಾದಾ ಯಾಕ ? ಇಗಾ ತೆಲಿ ಮ್ಯಾಲ ಹಸ್ತಾ ಇಡ್ತೀನಿ. ಅಲ್ದ ಇವತ್ತಿನಿಂದ ನಾ ಪೂಜಾ ಮಾಡ್ಕೊಳ್ಳೂ ಮುಂದ ಲಿಂಗಯ್ಯಗ ಒಂದು ದಳಾ ಪತ್ರಿ ನಿನ್ನ ಹೆರಿಲಿ ಏರಿಸಿ ಈ ತಾಯಿಗೆ ನೋವಿಲ್ದ ಸಾವು ಕೊಡಪಾ ಅಂತ ಬೇಡಕೋತೀನಿ ಆತಿಲ್ಲ ? ಅಂತ ಅಭಯ ನುಡಿದು ಕಲ್ಲಸಕ್ಕರಿ,ಗೋಡಂಬಿ,ದ್ರಾಕ್ಷಿ ಪ್ರಸಾದ ಕೊಟ್ಟು ಇವೆಲ್ಲಾ ವಿಟ್ಯಾಮಿನ್ ಇದ್ದಂಗ. ಪ್ರಸಾದದ ಹೆಸರಿಲೆ ತಿನಬೇಕವಾ ಅಂತ ಹಡದ ತಂದಿ ತಾಯಿ ಹೇಳೂ ಕಳ್ಳಿನ ಕಾಳಜಿ ಮಾತು ಹೇಳಿದ್ರು. ಸ್ವಾಮೀಜಿಯವರ ಕಳಕಳಿಯ ಮಾತಿಗೆ ಲಿಂಗಯ್ಯನೂ ಕರಗಿ ತಲೆಬಾಗಿದ ಅಂತ ಕಾಣ್ತದ. ಅಮ್ಮ ಬಯಸಿದಂಗ ಅಂಥಾ ಜಡ್ಡಿದ್ರೂ ನೋವಿಲ್ದ ಸಾವು ಬಂದು ಯಾವ ರೀತಿನೂ ನರಳದ ಅಮ್ಮ ಶಾಂತ ಆದಳು.

# ಕ್ಯಾನ್ಸರ್ ರೋಗಗಳನ್ನು ಹಬ್ಬಿಸಬಲ್ಲ ಯುರೇನಿಯಂ ಎಂಬ ಮಾರಿ !



ವಿಶ್ವಕ್ಕೆ ಅತಿ ಮುಖ್ಯವಾಗಿ ಬೇಕಾಗಿರುವ ಖನಿಜಗಳಲ್ಲಿ ಒಂದಾದ ಯುರೇನಿಂ ಅದಿರು ಹೈದ್ರಾಬಾದ ಕರ್ನಾಟಕದ ಗುಲಬರ್ಗಾ ಜಿಲ್ಲೆಯ ಶಹಾಪುರ ತಾಲೂಕಿನ ಗೋಗಿ ಎಂಬ ಗ್ರಾಮದಲ್ಲಿ ದೊರೆತಿರುವುದು ನಿಜಕ್ಕೂ ಸಂತೋಷದ ವಿಷಯವೆ ಆಗಿದೆ. ಈ ಅದಿರಿನ ಮೂಲಕ ಮನುಷ್ಯ ಇಂದು ಎದುರಿಸುತ್ತಿರುವ ವಿದ್ಯುತ್ ಹಾಗೂ ಅಣುಸ್ಥಾವರದ ಕಚ್ಚಾ ಸಾಮಗ್ರಿಯನ್ನು ಪೂರೈಸಬಲ್ಲುದು. ಇದು ಮೇಲ್ನೋಟಕ್ಕೆ ಸಂತೋಷದ ಸಂಗತಿ ಹೇಗೋ , ಜೀವಿಗಳೆಲ್ಲರ ಸರ್ವನಾಶಕ್ಕೂ ಕಾರಣವಾಗಬಲ್ಲುದು ಎಂಬುದು ವಿಷಾದನೀಯ ಸಂಗತಿ ಆಗಿದೆ. ಈ ಕಾರಣಕ್ಕಾಗಿಯೋ ಏನೋ ಕೆಲವು ಪ್ರಮುಖ ವ್ಯಕ್ತಿಗಳು ಈ ಯುರೇನಿಂನ್ನು ಭೂಗರ್ಭದ ರಾಕ್ಷಸ ಎಂದೂ ಕರೆಯುತ್ತಾರೆ. ಇದೆಲ್ಲ ಒತ್ತಟ್ಟಿಗಿರಲಿ , ಯುರೇನಿಂ ಎಂಬ ಖನಿಜ ವಸ್ತು ದೊರೆತಿರುವ ಹಿನ್ನೆಲೆಯಲ್ಲಿ ಸಂತೋಷದಿಂದ ಇರಬೇಕಾದ ಗೋಗಿ ಗ್ರಾಮದ ಜನತೆ ರಾಜಕಾರಣಿಗಳ ಹಾಗೂ ಭ್ರಷ್ಟ ಅಧಿಕಾರಿಗಳ ಕಳ್ಳ ಕೂಟದಿಂದ ತತ್ತರಿಸಿ ಹೋಗಿದ್ದಾರೆ.

ಈಗ್ಗೆ ಒಂಭತ್ತು ವರ್ಷಗಳ ಹಿಂದೆ ಸಮೀಕ್ಷೆಗೆಂದು ಬಂದ ಕೇಂದ್ರ ಸರಕಾರದ ಯುರೇನಿಂ ಅದಿರು ನಿಕ್ಷೇಪ ಶೋಧಿಸುವ ಒಂದು ತಂಡ ಗೋಗಿ ಬಂದು ಠಿಕಾಣಿ ಹೂಡಿ ತನ್ನ ಕೆಲಸವನ್ನು ಮೆಲ್ಲಗೆ ಶುರುಮಾಡಿತು. ನಾಲ್ಕಾರು ವರ್ಷ ಕಳೆಯುತ್ತಲೆ ಕೆಲವು ಸ್ಥಳೀಯ ಪುಢಾರಿಗಳ ಬೆಂಬಲದೊಂದಿಗೆ ಕೇಂದ್ರ ಸರಕಾರದ ರಕ್ಷಣಾ ಇಲಾಖೆಯ ಅಡಿಯಲ್ಲಿ ಈ ಅದಿರು ನಿಕ್ಷೇಪ ಶೋಧ ಕಾರ್ಯ ನಡೆದಿರುವುದರಿಂದ ಯಾವಾಗಲಾದರೂ ತಮ್ಮ ಭೂಮಿಯನ್ನು ಮುಟ್ಟುಗೋಲು ಹಾಕಿಕೊಳ್ಳಬಹುದು ಎಂದು ಹೇಳುತ್ತಲೆ ಅತ್ಯಂತ ನಿಕೃಷ್ಟ ದರದಲ್ಲಿ ರೈತರಿಂದ ಭೂಮಿಯನ್ನು ಕಸಿದುಕೊಳ್ಳುತ್ತಾ ಬಂತು.

ಆಗಲೂ ಕೂಡ ಗೋಗಿ ಗ್ರಾಮಸ್ಥರಾಗಲಿ , ರೈತ ಸಂಘದ ಪ್ರಮುಖರಾಗಲಿ ಕ್ಯಾರೆ ಅನ್ನಲಿಲ್ಲ. ಅಳಿಯನ ಕುರುಡು ಬರುಬರುತ್ತ ಬಯಲಾಯಿತು ಎಂಬಂತೆ ವರ್ಷಗಳು

ಉರುಳುತ್ತಿರುವಂತೆ ಅದಿರು ನಿಕ್ಷೇಪದಿಂದ ಒಂದೊಂದೆ ತೊಂದರೆಗಳು ಗ್ರಾಮದಲ್ಲಿ ಉಂಟಾಗತೊಡಗಿದವು. ಎಷ್ಟೋ ಕಾಲಗಳಾದರೂ, ಬರಗಾಲ ಬಿದ್ದರೂ ಬತ್ತದೆ ಇದ್ದ ಭಾವಿಗಳು ಬತ್ತತೊಡಗಿದವು. ಬೋರವೆಲ್‌ಗಳ ಹ್ಯಾಂಡಲ್ ಒತ್ತೆದದ್ದೆ ಬಂತು ಹನಿ ನೀರು ಅಲ್ಲಿಂದ ಜಿನುಗಲಿಲ್ಲ. ಭಗಿರಥ ಪ್ರಯತ್ನ ಪಟ್ಟು ನೀರು ತೆಗೆದರೂ ಆ ನೀರು ಕುಡಿಯಲು ಯೋಗ್ಯವಾದುವಾಗಿರಲಿಲ್ಲ. ಹಾಗಾಗಿ ಅನಿವಾರ್ಯವಾಗಿ ಊರಿನಿಂದ ನಾಲ್ಕೈದು ಕಿ.ಮೀ. ದೂರದಿಂದ ನೀರು ತಂದು ಕುಡಿಯುವ ಸಂದರ್ಭ ಈಗ ಉಂಟಾಗಿದೆ. ಇದೆಲ್ಲ ಪೀಕಲಾಟ ಯಾಕೆ ಎಂದು ಅದೇ ಬೋರಿನ ನೀರು ಕುಡಿದವರು, (ಪ್ಲೋರೈಡ್ ಅಂಶವಿರುವ ) ಕೀಲು ತೊಂದರೆಯಿಂದ ನರಳುತ್ತಿದ್ದಾರೆ. ವರ್ಷಾನುಗಟ್ಟಲೆ ಇದೆ ನೀರನ್ನು ಕುಡಿಯುತ್ತ ಹೋದರೆ ಮುಂದಿನ ಒಂದೆರಡು ವರ್ಷಗಳಲ್ಲಿ ಕ್ಯಾನ್ಸರ್ ರೋಗಕ್ಕೂ ಕಾರಣವಾಗಲಿದೆ ಎಂದು ಖ್ಯಾತ ಕ್ಯಾನ್ಸರ್ ರೋಗ ತಜ್ಞ ಡಾ. ಶೇಖರ ಪಾಟೀಲ ಪತ್ರಿಕಾ ಹೇಳಿಕೆಯನ್ನೂ ಕೊಟ್ಟಿದ್ದಾರೆ.

ಆದರೂ ಇಲ್ಲಿನ ಸಂಸದರಾಗಲಿ, ಶಾಸಕ ಮಾಜಿ ಮಂತ್ರಿ ದರ್ಶನಾಪುರ, ಎಂ.ಎಲ್.ಸಿ. ಅಮಾತೆಪ್ಪ ಕಂದಕೂರ ಮುಂತಾದ ಜನಪ್ರತಿನಿಧಿಗಳು ತಮಗೂ ಇದಕ್ಕೂ ಯಾವದೆ ಬಾದರಾಯಣ ಸಂಬಂಧವೆ ಇಲ್ಲ ಎಂದು ಗಡದ್ದಾಗಿ ಮಲಗಿದ್ದಾರೆ. ಅಧಿಕಾರಿಗಳೆಂದು ಗೋಸುಂಬೆಗಳು ಗಪ್ ಚುಪ್ ಕುಳಿತ್ತಿದ್ದಾರೆ. ಬಹುಶಃ ಇವರ ದಿವ್ಯ ಮೌನದ ಹಿಂದೆ ಕಳ್ಳ ಹೆಜ್ಜೆಗಳೂ ಇವೆ ಎಂಬುದು ಕರ್ನಾಟಕ ರಾಜ್ಯ ರೈತ ಸಂಘದ ರಾಜ್ಯ ಸದಸ್ಯರಲ್ಲಿ ಒಬ್ಬರಾದ ಬಸವರಾಜ ರಾಚರೆಡ್ಡಿ ಗುಮಾನಿ ಪಡುತ್ತಾರೆ.

ಈ ಗುಮಾನಿಯಲ್ಲಿ ಸತ್ಯಾಂಶಗಳು ಇಲ್ಲದೆ ಇಲ್ಲ. ಏಕೆಂದರೆ ಕೇಂದ್ರ ಸರಕಾರದ ರಕ್ಷಣಾ ಇಲಾಖೆಯ ಅಧೀನದಲ್ಲಿ ಭೂಮಿಯನ್ನು ಅಗೆದು ಯುರೇನಿಂ ಹೊರತೆಗೆಯುವ ಶೋಧ ಕಾರ್ಯ ತೊಡಗುವ ಮುನ್ನವೆ , ಮುನ್ನೆಚ್ಚರಿಕೆಯ ಕ್ರಮವಾಗಿ ಅದು ಆ ಪ್ರದೇಶದಲ್ಲಿ ಬರುವ ಜನ ಜಾನುವಾರ ಮುಂತಾದವುಗಳ ವಿತ್ತ ಜೀವಕ್ಕೆ ತೊಂದರೆಯಾಗದಂತೆ ನೋಡಿಕೊಳ್ಳಬೇಕಾದುದು ಅವರ ಕರ್ತವ್ಯ. ಮೇಲಾಗಿ ತನ್ನ ಇಡೀ ಬದುಕನ್ನು ಭೂಮಿತಾಯಿಯ ಉತ್ತು - ಬಿತ್ತಿ ಬೆಳೆಯುವ ಮೂಲಕವೆ ಜೀವಿಸುವ ರೈತರನ್ನು ಆ ಸ್ಥಳದಿಂದ ಏಕ್ ದಂ ಒಕ್ಕಲೆಕ್ಕಿಸುವುದು ಅಷ್ಟು ತರವಲ್ಲ. ಭೂಮಿಯನ್ನು ಕಳೆದುಕೊಂಡ ರೈತರಿಗೆ ಪರ್ಯಾಯ ಬದುಕನ್ನು ಕಟ್ಟಿಕೊಡುವ ಮೂಲಕ ಆ ಭೂಮಿಯನ್ನು ವಶಪಡಿಸಿಕೊಳ್ಳವುದು ನ್ಯಾಯ.

ಇದೆಲ್ಲ ಮರೆತಿರುವ ಕೇಂದ್ರ ಸರಕಾರದ ಕಳ್ಳ ಅಧಿಕಾರಿಗಳು, ಸ್ಥಳೀಯ ಪುಢಾರಿಗಳನ್ನು ಓಡಕೊಂಡು ಕಳ್ಳಾಟ ನಡೆಸಿ, ರೈತರ ಜೀವನದೊಂದಿಗೆ ಚೆಲ್ಲಾಟವಾಡುತ್ತಿದ್ದಾರೆ. ಇಡೀ ಗ್ರಾಮಸ್ಥರ ಬದುಕು ಮುರಿದು ಮೂರಾಬಟ್ಟೆಯಾಗುತ್ತಿದ್ದರೂ ದಿವ್ಯ ಮೌನವಹಿಸಿರುವ ಅಧಿಕಾರಿಗಳ , ರಾಜಕೀಯ ಗೋಸುಂಬೆಗಳ ಭ್ರಷ್ಟ ಸಂಬಂಧವನ್ನು ವಿರೋಧಿಸಿ ಕರ್ನಾಟಕ ರಾಜ್ಯ ರೈತ ಸಂಘ ಭೂಮಿತಾಯಿ ಹೋರಾಟ ಸಮಿತಿಯನ್ನು ರಚಿಸಿಕೊಂಡು, ಬಸವರಾಜ ರಾಚರಡ್ಡಿಯವರ ನೇತೃತ್ವದಲ್ಲಿ ಹೋರಾಟದ ಅಖಾಡಕ್ಕೆ ಮುನ್ನುಗ್ಗಿದೆ.

ತಾನು ರೈತ ಪ್ರೇಮಿಯೆಂದು ಹೋದಲ್ಲಿ ಬಂದಲೆಲ್ಲ ಜಂಭಕೊಚ್ಚಿಕೊಳ್ಳುವ , ರೈತರ ಹೆಸರಿನ ಮೇಲೆ ಪ್ರಮಾಣ ವಚನ ಮಾಡಿಕೊಂಡು ಮುಖ್ಯ ಮಂತ್ರಿಯ ಗಾದಿ ಏರಿ ಕುಳಿತಿರುವ ಯಡ್ಡಿ ಈ ಗೋಗಿ ಗ್ರಾಮದ ನತದೃಷ್ಟ ರೈತರ ಕಡೆ ತಮ್ಮ ಕೃಪಾಕಟಾಕ್ಷ ಬೀರುವರೆ ಕಾದು ನೋಡಬೇಕು.

# ಓಳು ಬಿಡುತ್ತಿರುವ ಎಂ.ಎಸ್. ಬ್ಯಾಹೆಸ್



ಇಡೀ ಗೋಗಿ ಗ್ರಾಮಸ್ಥರು ಸ್ವಚ್ಛವಾದ ಕುಡಿಯುವ ನೀರಿಗೆ ಹಪಹಪಿಸುತ್ತಾ ಕುಳಿತಿರುವಾಗ ಅಣು ಸಂಶೋಧನಾ ಕೇಂದ್ರದ ವ್ಯವಸ್ಥಾಪಕ ಎಂ.ಎಸ್. ಬ್ಯಾಹೆಸ್ ಎಂಬ ತಲೆತಿರುಕ ಮಾತ್ರ ಸರಕಾರದ ಕೈಗೊಂಬೆಯಾಗಿಯೊ , ಸ್ಥಳೀಯ ಪುಢಾರಿಗಳ ಜೊತೆಗಿನ ಒಳ ಒಪ್ಪಂದಕ್ಕೆ ಒಳಗಾಗಿಯೊ ಏನೊ ? ಯುರೇನಿಯಂ ಗಣಿಗಾರಿಕೆಯ ವಿಷಪೂರಿತ ಗಾಳಿಯಿಂದ ಕ್ಯಾನ್ಸರ್ ಮುಂತಾದ ಮಾರಕ ರೋಗಗಳು ಬರುವುದಿಲ್ಲ ಎಂದು ಬುರುಡೆ ಬಿಡುತ್ತಾನೆ.

೧೩೦ ಎಕರೆ ಭೂಮಿಯನ್ನು ರೈತರಿಂದ ವಶಪಡಿಸಿಕೊಂಡು ಗಣಿಗಾರಿಕೆ ನಡೆಸಲು ಸಕಲ ಸಿದ್ಧತೆ ನಡೆದಿದೆ. ಭೂಮಿಯನ್ನು ಒಂದು ಸಾವಿರ ಆಳದಷ್ಟು ಕೊರೆದು ಗಣಿಗಾರಿಕೆ ಮಾಡುವುದರಿಂದ ಅಂತರ್ಜಲದ ಮಟ್ಟ ಕುಸಿಯುವುದಾಗಲಿ, ಕಲುಷಿತವಾಗುವುದಾಗಲಿ ಸಾಧ್ಯವಿಲ್ಲ ಎಂದು ತಿಪ್ಪೆಸಾರಿಸುತ್ತಾನೆ. ಆದರೆ ಊರಿನಲ್ಲಿ ಇತ್ತೀಚೆಗೆ ಬೋರವೆಲ್‌ಗಳಿಂದ ಬರುತ್ತಿರುವ ಕಲುಷಿತ ನೀರನ್ನು ಕುಡಿಯಲು ಹಿಂದೇಟು ಹಾಕುತ್ತಾನೆ.

ಸ್ಥಳೀಯ ಜನತೆ ತಮ್ಮ ಗಣಿಗಾರಿಕೆಗೆ ಅನುವುಮಾಡಿಕೊಟ್ಟರೆ ಮುಂದೆ ಇಲ್ಲಿನ ಜನತೆಗೆ ಉದ್ಯೋಗ ಅವಕಾಶ ಒದಗಿಸಿಕೊಡಲಾಗುತ್ತದೆ ಎಂದು ಮತ್ತೊಂದು ಓಳು ಬಿಡುತ್ತಾನೆ. ಆದರೆ ಇದಕ್ಕೆ ಸಂಬಂಧಿಸಿದಂತೆ ಸರಕಾರದ ಅಧಿಕೃತ ಪತ್ರವನ್ನು ಪ್ರದರ್ಶಿಸುವ ತಾಕತ್ತು ಮಾತ್ರ ಮಾಡುತ್ತಿಲ್ಲ.

ಒಟ್ಟಿನಲ್ಲಿ ರೈತರ ಮೂಗಿಗೆ ತುಪ್ಪ ಸವರಿ ಅವರ ಇಡೀ ಬದುಕನ್ನು ಹೀನಾಯ ಮಾಡಿಹೋಗುವ ಕಳ್ಳ ಹುನ್ನಾರಗಳು ಸಾಕಷ್ಟು ನಡೆದುಹೋಗಿವೆ.

# ಒಡೆದ ತೂತಾದ ಪಿವಿಸಿ ಪೈಪಿಗೆ ಮರುಜನ್ಮ

ನೀರಾವರಿ ತೋಟದಲ್ಲಿ ಮಣ್ಣಿನೊಳಗೆ ಹಾಕಿರುವ ಪಿವಿಸಿ ಪೈಪ್ ಅಗೆಯುವಾಗ ತಾಗಿ ತೂತಾಗುವುದು ಅಥವಾ ಒಡೆಯುವುದು ಸಾಮಾನ್ಯ. ಹೀಗೆ ತೂತಾದ ಪೈಪನ್ನು ಸರಿಪಡಿಸಲು ಸುಲಭ ಉಪಾಯ ಇಲ್ಲಿದೆ. ತೂತಾದ ಜಾಗವನ್ನು ಹೊಗೈ ಕಾಗದವನ್ನು ಬಳಸಿ ಶುಚಿಗೊಳಿಸಿ. ತೂತಾದ ಪೈಪಿನದ್ದೇ ಅಳತೆಯ ಪೈಪಿನ ಒಂದು ತುಂಡನ್ನು ತೆಗೆದುಕೊಳ್ಳಿ. ತುಂಡು ತೂತಿನ ಸುತ್ತಲೂ ಅರ್ಧ ಇಂಚು ಜಾಸ್ತಿ ಮುಚ್ಚುವಷ್ಟು ದೊಡ್ಡದಿರಬೇಕು. ಅದರ ಒಳಮೈಯನ್ನು ಹೊಗೈ ಕಾಗದ (ಸ್ಯಾಂಡ್ ಪೇಪರ್ ) ಬಳಸಿ ಶುಚಿಗೊಳಿಸಿ. ಅನಂತರ ಗಮ್ ಹಾಕಿ ತೂತಿನ ಮೇಲೆ ತುಂಡನ್ನಿಟ್ಟು ಗಟ್ಟಿಯಾಗಿ ಕಟ್ಟಿರಿ. ಕಟ್ಟಲು ಸಬ್ ಮರ್ಸಿಬಲ್ ಮೋಟರಿನ ವೈಂಡಿಂಗ್ ವಯರನ್ನು ಬಳಸುವುದು ಸೂಕ್ತ. ೦ ರಾಮಚಂದ್ರ ಕೆ. ನೆಕ್ಕಿಲ

# ಹೃದಯದಿಂದ ಹೊರಬಂದ ಪುಸ್ತಕಗಳು ಹೃದಯವನ್ನು ತಟ್ಟುತ್ತವೆ



ಹರಳು ಹುರಿದಂತೆ ಸ್ಪಷ್ಟ ಮಾತು.ಯಾರಪ್ಪನಿಗೆ ಸಿಟ್ಟು ಬಂದರೂ ಸೈ ಇದ್ದುದ್ದನ್ನು ಇದ್ದಂತೆ ಹೇಳುವ ಗುಣ. ಕಾಣಿಯುಸೋಲ ಅರ್ಧಗಾಣಿಯ ಗೆಲ್ಲ ಎಂಬ ಮನೋಭಾವ.

ಜೀವನವನ್ನು ಸಂಪೂರ್ಣ ಸವೆಯೆ ಬಳಸಬೇಕೆಂಬ ತುಡಿತದ ಪಾಪು ಅವರಂಥವ ಮಾತು ನಮ್ಮ ಬದುಕಿಗೆ ಒಂದು ಬೆಳಕು.

ಮನುಷ್ಯನು ತನ್ನ ಮಕ್ಕಳಿಗೆ ಏನನ್ನಾದರೂ ಬಿಟ್ಟು ಹೋಗುವುದಿದ್ದರೆ, ಬ್ಯಾಂಕಿನ ಠೇವಣಿಯನ್ನಲ್ಲ. ಒಳ್ಳೆಯ ಪುಸ್ತಕಗಳಿಂದ ತುಂಬಿದ ಗೃಹ ಗ್ರಂಥಾಲಯವನ್ನು ಬಿಟ್ಟು ಹೋಗಬೇಕು. ಅದರಲ್ಲಿ ಮನುಷ್ಯನಿಗೆ ಬೇಕಾದುದೆಲ್ಲವೂ ಇರುತ್ತದೆ.

ಈ ಜಗತ್ತು ಕಂಡಿರುವ ಮನುಷ್ಯ ನಿರ್ಮಾಣದ ಅತ್ಯಂತ ಗಮನಾರ್ಹ ಸೃಷ್ಟಿಯೆಂದರೆ ಪುಸ್ತಕಗಳು. ಏನು ಅಳಿದರೂ ಪುಸ್ತಕಗಳು ಬದುಕಿ ಉಳಿದಿರುತ್ತವೆ. ಮನುಷ್ಯ ಕಟ್ಟಿರುವುದು ಯಾವುದು ಸ್ಥಿರವಾಗಿ ನಿಲ್ಲುವುದಿಲ್ಲ. ಕೀರ್ತಿ ಸ್ತಂಭಗಳು ಕುಸಿದು ಬೀಳುತ್ತವೆ. ರಾಷ್ಟ್ರಗಳು ನಾಶಗೊಳ್ಳುತ್ತವೆ. ನಾಗರಿಕತೆಗಳಿಗೆ ವೃದ್ಧಾಪ್ಯ ಬಂದು ಅವು ಸತ್ತು ಹೋಗುತ್ತವೆ. ಆದರೆ ಪುಸ್ತಕಗಳಿಗೆ ಸಾವು ಬರುವುದಿಲ್ಲ.

ಹೃದಯದಿಂದ ಬಂದುದು ಹೃದಯಕ್ಕೆ ಹೋಗುತ್ತದೆ. ಹೃದಯದಿಂದ ಬಂದ ಪುಸ್ತಕಗಳು ಶತಮಾನಗಳ ನಂತರವೂ ಇನ್ನೂ ಜನ್ಮವೆತ್ತಿ ಬರದಿರುವ ಪೀಳಿಗೆಗಳ ಹೃದಯಗಳನ್ನು ತಟ್ಟುತ್ತದೆ. ಗುರುಗಳು ನಮಗೆ ಕೆಲವೊಂದನ್ನು ಹೇಳಬಹುದು. ಅವರು ನಮಗೆ ಹೇಳಿದ, ಹೇಳದೇ ಇರುವ ಎಲ್ಲ ಜ್ಞಾನವೂ ಪುಸ್ತಕಗಳಲ್ಲಿ ಇರುತ್ತದೆ. ನಮಗೆ ಬೋಧೆ ನೀಡುವ ಜನರಲ್ಲಿ ಇಲ್ಲದ ಒಂದು ದೊಡ್ಡ ಗುಣ ಪುಸ್ತಕಗಳಲ್ಲಿ ಇರಬಹುದು. ಆದರೆ ಪುಸ್ತಕಗಳು ನಮಗೆ ಬೇಕಾದುದನ್ನು ಬೇಸರವಿಲ್ಲದೆ, ಎಷ್ಟು ಸಲವಾದರೂ ಪುನರುಚ್ಚರಿಸುತ್ತವೆ.

ಮನುಷ್ಯನು, ತನ್ನ ಸ್ನೇಹಿತನನ್ನು ಆರಿಸಿಕೊಳ್ಳುವಂತೆ, ತಾನು ಓದುವ ಪುಸ್ತಕಗಳನು ಆರಿಸಿಕೊಳ್ಳಬೇಕು. ಯಾರು ನಮ್ಮನ್ನು ವಂದಿಸಿದರೂ ಪುಸ್ತಕಗಳು ನಮ್ಮನ್ನು ವಂಚಿಸಲಾರವು.

ಪುಸ್ತಕಗಳು ನಮಗೆ ಒಳ್ಳೆಯ ರೀತಿಯಿಂದ ಹೇಗೆ ಬದುಕಬೇಕೆನ್ನುವುದನ್ನು ಹೇಳಿಕೊಡುತ್ತವೆ. ನಾವು ಬದುಕುವುದಕ್ಕೋಸುಗ ತಿಳಿಯಬೇಕಲ್ಲದೆ, ತಿಳಿಯುವುದಕ್ಕೋಸುಗ ಬದುಕಬಾರದು.

ನಾವು ಪುಸ್ತಕಗಳಿಂದ ಕಲಿಯುವುದು ಇರುವಂತೆ ಜಗತ್ತಿನಿಂದ ಕಲಿಯುವುದೂ ಇದೆ. ಅದಕ್ಕೆಂತಲೇ ಕೋಸ ಓದಬೇಕು, ದೇಶ ನೋಡಬೇಕು ಎಂದು ಹೇಳುತ್ತಾರೆ. ನಿಜವಾದ ಬುದ್ಧಿವಂತನು ಪುಸ್ತಕಗಳನ್ನು ಓದುವಂತೆ ಜೀವನವನ್ನೂ ಓದಬೇಕೆಂದು ಚೀನಿ ಪಂಡಿತ ಲಿನ್ ಯುಟಾಂಗ ಹೇಳುತ್ತಿದ್ದನು.

ಮನುಷ್ಯನ ಚಾರಿತ್ರ್ಯವು ಅವನು ಯಾರೊಂದಿಗೆ ಇರುವನೋ ಅವರೊಂದಿಗೆ ನಿರ್ಮಾಣವಾಗುವಂತೆ , ಅದು ಅವನು ಓದುವ ಪುಸ್ತಕಗಳಿಂದಲೂ ನಿರ್ಮಾಣವಾಉತ್ತದೆ. ಚಳಿಗಾಲದಲ್ಲಿ ಅಗ್ಗಿಷ್ಟಿಕೆಯ ಬಳಿಯಲ್ಲಿ ಬೆಚ್ಚಗೆ ಕುಳಿತು ಓದುವ ಪುಸ್ತಕಗಳಿರುವಂತೆ ಅಗ್ಗಿಷ್ಟಿಕೆಯಲ್ಲಿ ಹಾಕಿ ಬೆಚ್ಚಗೆ ಆಗಬೇಕಾದ ಪುಸ್ತಕಗಳೂ ಇವೆ.

# ಆಂಧ್ರದ ಆರಾಧ್ಯರ ಕೈಯಲ್ಲಿ ಸಿಕ್ಕುಬಿದ್ದು ನರಳುತ್ತಿರುವ ಕರ್ನಾಟಕದ ಲಿಂಗಾಯತರು

೦ ಡಾ.ಎಂ.ಎಂ.ಕಲ್ಬುರ್ಗಿ
ವಿಶ್ರಾಂತ ಕುಲಸಚಿವರು, ಧಾರವಾಡ

ವೀರಶೈವರ ಪರವಾಗಿ ಇತ್ತೀಚೆಗೆ ಮತ್ತೆ ಮತ್ತೆ ವಾದಿಸುತ್ತಿರುವ ಡಾ.ಎಂ.ಚಿದಾನಂದಮೂರ್ತಿ ಜನರಿಗೆ ಅಡ್ಡ ದಾರಿಯನ್ನು ತೋರಿಸುವ ಸಂಶೋಧನೆ ನಡೆಸಿದ್ದಾರೆ. ಈ ನಡುವೆ ಗದುಗಿನ ಹಾಗೂ ಚಿತ್ರದುರ್ಗದ ಶ್ರೀಗಳು ವೀರಶೈವ ಪದವನ್ನು ಬಳಸಬೇಕೆಂದು ದಿನಪತ್ರಿಕೆಗಳಲ್ಲಿ ಬರೆದು ಈ ಶಬ್ದದ ಪರವಾಗಿ ಮಾತನಾಡಿದ್ದಾರೆ. ಸತ್ಯದ ಸಂಗತಿಯೆಂದರೆ ವೀರಶೈವ ಹಾಗೂ ಲಿಂಗಾಯತ ಎಂಬ ಶಬ್ಧಗಳಲ್ಲಿ ಯಾವುದು ಪ್ರಾಚೀನ ಎಂಬ ಕುರಿತು ಸಂಶೋಧನೆಗೆ ತೊಡಗಿಕೊಂಡರೆ ಲಿಂಗಾಯತ ಎಂಬ ಪದವೇ ಪ್ರಾಚೀನ ಪದವಾಗಿ ಹೊರಹೊಮ್ಮುತ್ತದೆ.

ಹನ್ನೆರಡನೆಯ ಶತಮಾನದ ವಚನಗಳ ಷಟಸ್ಥಲ ಕಟ್ಟುಗಳಲ್ಲಿ ತಪ್ಪಿಯೂ ಕಂಡು ಬರದ ವೀರಶೈವ ಶಬ್ಧ ಹೆಚ್ಚಿನ ವಚನಗಳಲ್ಲಿ ಮಾತ್ರ ಸಿಗುತ್ತಿರುವುದು ಸೋಜಿಗವನ್ನುಂಟು ಮಾಡುತ್ತದೆ ! ಹದಿಮೂರನೆಯ ಶತಮಾನದ ಹರಿಹರ , ರಾಘವಾಂಕ, ಕೆರೆಯ ಪದ್ಮರಸರ ಕಾವ್ಯಗಳಲ್ಲಿ ಅಪ್ಪಿತಪ್ಪಿಯೂ ವೀರಶೈವ ಪದಬಳಕೆ ಕಂಡುಬರುವುದಿಲ್ಲವೇಕೆ ?

ತಮಾಷೆಯ ಸಂಗತಿಯೆಂದರೆ ಹದಿನಾಲ್ಕನೆಯ ಶತಮಾನದ ಬಸವ ಪುರಾಣದಲ್ಲಿ ಮೊಟ್ಟ ಮೊದಲ ಸಲ ಅಧಿಕೃತವಾಗಿ ವೀರಶೈವ ಪದ ಬಳಕೆ ಮಾಡುತ್ತಾರೆ. ಆದರೆ ಈ ಕೃತಿ ರಚನೆಗೆ ಮೂಲವಾಗಿರುವ ೧೩ನೇ ಶತಮಾನದ ತೆಲುಗು ಬಸವ ಪುರಾಣದಲ್ಲಿ ವೀರಶೈವ ಎಂಬ ಪದ ಬಳಸಿಲ್ಲದಿರುವುದು ಏನನ್ನು ತೋರಿಸುತ್ತದೆ ?

ಮೊದಮೊದಲು ವೀರಮಾಹೇಶ್ವರಾಚಾರ ಸಂಗ್ರಹ ಮೊದಲಾದ ಶೀರ್ಷಿಕೆಯ ಗ್ರಂಥಗಳು ೧೫ ಶತಮಾನದ ಬಳಿಕ ವೀರಶೈವಾಮೃತ ಮಹಾಪುರಾಣ ಮೊದಲಾದ ಶೀರ್ಷಿಕೆಯ ಗ್ರಂಥಗಳು ಹುಟ್ಟಿಕೊಂಡಿರುವುದು ವೀರಮಾಹೇಶ್ವರ ಪ್ರಾಚೀನ. ವೀರಶೈವ ಆಧುನಿಕವೆಂಬುದು ಸೂಚಿಸುವುದಿಲ್ಲವೆ ?

ನಾನು ಮೊದಲಿನಿಂದಲೂ ಕೇಳುತ್ತಲೆ ಬಂದಿರುವ ಈ ನಾಲ್ಕು ಪ್ರಶ್ನೆಗಳಿಗೆ ಸ್ಪಷ್ಟ ಉತ್ತರ ನೀಡದೆ , ಜಾಣಕಿವುಡು ಪ್ರದರ್ಶಿಸುತ್ತ ಕೃತಕ(ಪೆಚ್ಚಿನ) ವಚನ, ೧೫ ನೆಯ ಶತಮಾನದ ತರುವಾಯದ ಆಕರಗಳನ್ನು ಬಳಸಿ ಜನರಿಗೆ ಎತ್ತಿ ತೋರಿಸುವುದು ನಿಜವಾದ ಸಂಶೋಧನೆಯಾಗುತ್ತದೆಯೆ ?

೧೬ ನೇ ಶತಮಾನದಷ್ಟು ಇತ್ತೀಚಿನವರಾದ ತೋಂಟದಾರ್ಯ , ಅವರ ಶಿಷ್ಯ ಮುರುಘಾಶಾಂತವೀರರು ವೀರಶೈವ ಪದ ಬಳಸಿದ್ದಾರೆ ಎನ್ನುವುದು , ಕರ್ನಾಟಕದ ಆರಂಭದ ಮುಖ್ಯಮಂತ್ರಿಗಳಾದ ನಿಜಲಿಂಗಪ್ಪ, ವೀರೇಂದ್ರಪಾಟೀಲರು ಮೈಸೂರು ರಾಜ್ಯ ಪದ ಬಳಸಿರುವುದರಿಂದ ಈ ರಾಜ್ಯಕ್ಕೆ ಆ ಹೆಸರನ್ನು ಈಗಲೂ ಬಳಸಬಹುದು ಎಂದಂತಾಗುತ್ತದೆ.



೧೭೨೦ ರಲ್ಲಿ ಬರೆದ ಶಿವಾಜಿ ಮಲ್ಲಮ್ಮಾಜಿ ಸಮರೋತ್ಸವ ಕೃತಿಯಲ್ಲಿ ಬೆಳವಡಿ ಮಲ್ಲಮ್ಮನ ಮದುವೆಗೆ ಬಂದಿದ್ದ ಪಂಚಸಿಂಹಾಸನಾಧೀಶ್ವರರನ್ನು ಲಿಂಗಾಯತ ಘರ್ಮದವರೆಂದು ಕರೆದುದನ್ನು ಡಾ. ಮೂರ್ತಿ ಎತ್ತಿ ಹೇಳಿದ್ದಾರೆ. ಆದರೆ ಮೂವತ್ತು ಪುಟಗಳ ಈ ಸಣ್ಣ ಕೃತಿಯಲ್ಲಿ ೯ ಸಲ ಲಿಂಗಾಯತ ಪದ ಬಳಸಲಾಗಿದೆಯೇ ಹೊರತು , ಒಮ್ಮೆಯೂ ವೀರಶೈವ ಪದ ಬಳಸಿಲ್ಲ. ಇದರಿಂದ ಕರ್ನಾಟಕದ ಲಿಂಗಾಯತದಲ್ಲಿ ಸೇರಿಕೊಂಡ ಆಂದ್ರದ ಆರಾಧ್ಯ ಜಂಗಮರ ಗುರುಗಳಾದ ಪಂಚಾಚಾರ್ಯರನ್ನು ಬೆಳವಡಿ ಮಲ್ಲಮ್ಮನ ಮದುವೆಯವರೆಗೂ ಲಿಂಗಾಯತರೆಂದೇ ಕರೆಯುತ್ತಿದ್ದರೆಂದು ಸ್ಪಷ್ಟವಾಗುತ್ತದೆ.

ಇನ್ನೂ ಮುಂದುವರೆದು ಹೇಳುವುದಾದರೆ ಆಂದ್ರ ಪ್ರದೇಶದಿಂದ ದಕ್ಷಿಣ ಕರ್ನಾಟಕಕ್ಕೆ ಬಂದ ಈ (ಆರಾಧ್ಯ) ಜಂಗಮರ ಪ್ರಭಾವಕ್ಕೆ ಉತ್ತರ ಕರ್ನಾಟಕದ(ಶರಣ) ಜಂಗಮರು ಒಳಗಾಗಿ, ತಮ್ಮ ಶರಣ ತತ್ವ ಆಚರಣೆಗೆ ಬದಲು ಆರಾಧ್ಯರ ತತ್ವ - ಆಚರಣೆಗಳನ್ನು ನಂಬುವ, ಅವರ ಜಗದ್ಗುರುಗಳನ್ನು ತಮ್ಮ ಜಗದ್ಗುರುಗಳೆಂದು ಒಪ್ಪಿಕೊಳ್ಳುವ , ಧರ್ಮಕ್ಕೆ ಅವರು ಬಳಸಿದ ವೀರಶೈವ ಪದವನ್ನು ಸ್ವೀಕರಿಸುವ ತಪ್ಪು ಮಾಡಿದರು.

ಸಿರಸಂಗಿ ಲಿಂಗರಾಜರು, ಹಾನಗಲ್ಲ ಕುಮಾರಸ್ವಾಮಿಗಳು, ಅರಟಾಳ ರುದ್ರಗೌಡರು, ವಾರದ ಮಲ್ಲಪ್ಪನವರಂಥ ಅಂದಿನ ಸಮಾಜದ ಹಿರಿಯರು ಆವ ಮಾತಿಗೆ ಮೋಸ ಹೋಗಿ ವೀರಶೈವ ಮಹಾಸಭಾ , ವೀರಶೈವ ಸಂಸ್ಕೃತ ಪಾಠಶಾಲೆ ಇತ್ಯಾದಿ ಹೆಸರುಗಳ ಸಂಸ್ಥೆಗಳನ್ನು ಸ್ಥಾಪಿಸುತ್ತ ನಡೆದರು. ಸಾಲದುದಕ್ಕೆ , ಕರ್ನಾಟಕದ ಲಿಂಗಾಯತರನ್ನು ಆಂದ್ರದ ವೀರಶೈವರು ಆಳುವುದಕ್ಕೆ ಪೂರಕವಾದ ಸಾಹಿತ್ಯವನ್ನು , ಮಠಗಳಲ್ಲಿ ತಳವೂರಿದ್ದ ಶಾಸ್ತ್ರೀಗಳು, ವಿದ್ಯಾ ಸಂಸ್ಥೆಗಳಲ್ಲಿ ನೆಲೆ ನಿಂತಿದ್ದ ಅಧ್ಯಾಪಕರೂ ಸೃಷ್ಟಿಸುತ್ತ ಬಂದರು. ಇದರ ಜೊತೆಗೆ ಬೆಂಗಳೂರಿನಲ್ಲಿ ಸ್ಥಾಪಿಸಿದ್ದ(೧೯೦೫)ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯು ಹೆಸರನ್ನು ಕರ್ನಾಟಕ ವೀರಶೈವ ವಿದ್ಯಾಭಿವೃದ್ಧಿ ಸಂಸ್ಥೆಯೆಂದು , ಸೊಲ್ಲಾಪುರದಲ್ಲಿ ಸ್ಥಾಪಿಸಿದ್ದ (೧೯೦೭) ಲಿಂಗಾಯತ ಅಸೋಸಿಯೇಶನ್ ಹೆಸರನ್ನು ವೀರಶೈವ ಮಹಾಜನ ಸಭೆ ಎಂದು ಆರಾಧ್ಯದಿಂದ ಪ್ರಭಾವಿತರಾದವರು ಬದಲಿಸಿದರು.

ಲಿಂಗಾಯತವನ್ನು ಕೆಡಹುವ , ವೀರಶೈವವನ್ನು ಕಟ್ಟುವ ಇಂಥ ಉಪಕ್ರಮಗಳಿಂದಾಗಿ ಜಗತ್ತಿಗೆ ಕನ್ನಡಿಗರ ಕೊಡುಗೆಯಾದ ಶರಣ ಸಂಸ್ಕೃತಿ ಆಂದ್ರದ ಆರಾಧ್ಯರ ಮುಷ್ಟಿಯಲ್ಲಿ ನರಳುತ್ತ ಬಂದಿತು.

ಬೆಂಗಳೂರಿನಲ್ಲಿ ಸ್ಥಾಪಿಸಿದ್ದ (೧೯೦೫) ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯು ಹೆಸರನ್ನು ಕರ್ನಾಟಕ ವೀರಶೈವ ವಿದ್ಯಾಭಿವೃದ್ಧಿ ಸಂಸ್ಥೆಯೆಂದು , ಸೊಲ್ಲಾಪುರದಲ್ಲಿ ಸ್ಥಾಪಿಸಿದ್ದ (೧೯೦೭) ಲಿಂಗಾಯತ ಅಸೋಸಿಯೇಶನ್ ಹೆಸರನ್ನು ವೀರಶೈವ ಮಹಾಜನ ಸಭೆ ಎಂದು ಆರಾಧ್ಯದಿಂದ ಪ್ರಭಾವಿತರಾದವರು ಬದಲಿಸಿದರು. ಲಿಂಗಾಯತವನ್ನು ಕೆಡಹುವ , ವೀರಶೈವವನ್ನು ಕಟ್ಟುವ ಇಂಥ ಉಪಕ್ರಮಗಳಿಂದಾಗಿ ಜಗತ್ತಿಗೆ ಕನ್ನಡಿಗರ ಕೊಡುಗೆಯಾದ ಶರಣ ಸಂಸ್ಕೃತಿ ಆಂದ್ರದ ಆರಾಧ್ಯರ ಮುಷ್ಟಿಯಲ್ಲಿ ನರಳುತ್ತ ಬಂದಿತು.



# ಸಮಾಜಮುಖಿ ಚಿಂತನೆಯ ನಾಗತಿಹಳ್ಳಿ ಚಂದ್ರಶೇಖರ

ನಾಗತಿಹಳ್ಳಿ ಚಂದ್ರಶೇಖರ ಎಲ್ಲರೂ ಬಲ್ಲಂತೆ ಸೃಜನಶೀಲ ಬರಹಗಾರ. ಅವರ ಬರಹ ಯಾವತ್ತೂ ಒಣ ವೇದಾಂತವಲ್ಲ. ನಿತ್ಯದ ಬದುಕಿನ ಜಂಜಡಗಳು, ಜನಸಾಮಾನ್ಯನ ನೋವು-ನಲಿವುಗಳನ್ನೆ ಸಾರ್ವತ್ರಿಕರಣಗೊಳಿಸಿ ಅವನ್ನು ಹೃದ್ಯವಾಗಿ ಹೇಳುವ ಮೂಲಕ ಓದುಗನ ಮನಸ್ಸಿನೊಳಗೊಂದು ಸಾತ್ವಿಕ ಭಾವನೆ ಮೂಡಿಸಬಲ್ಲರು. ಆತನನ್ನು ಸಮಾಜ ಮುಖಿಯಾಗಿ ಆಲೋಚಿಸುವಂತೆ – ಚಿಂತನೆ ಮಾಡುವಂತೆ ಪ್ರೇರೆಪಿಸಬಲ್ಲರು. ಇದು ನಾಗತಿಹಳ್ಳಿ ಬರಹಗಾರಿಕೆಯ ಮೂಲಗುಣ.

ಅಂದಂತೆ ನಾಗತಿಹಳ್ಳಿ ಮೊದ ಮೊದಲು ಪತ್ರಿಕೆಗಳಿಗೆ ವರದಿ – ಕತೆಗಳನ್ನು ಬರೆಯುತ್ತ ಬರೆಯುತ್ತಲೆ ಗಾಂಧಿನಗರದತ್ತ ಮುಖಮಾಡಿದಾಗ ಹಲವಾರು ಜನ ಸೋಕಾಲ್ಡ ಬುದ್ದಿಜೀವಿಗಳು ಗಾಂಧಿನಗರದಲ್ಲಿ ಕಳೆದುಹೋಗುವ ಬರಹಗಾರ ಎಂದು ವ್ಯಂಗ್ಯವಾಡಿದ್ದರು. ಅಂದ ಹಾಗೆ ಗಾಂಧಿನಗರ ಕೂಡ ನಿಜವಾದ ಒಬ್ಬ ಸೃಜನಶೀಲ ಬರಹಗಾರನನ್ನು ಇಟ್ಟುಕೊಂಡು , ಆತನ ಸೂಕ್ಷ್ಮ ಸಂವೇದನೆಗಳನ್ನು ತನ್ನ ಕ್ಯಾನವಾಸಮೇಲೆ ಬಿಂಬಿಸಿದ್ದಾಗಲಿ, ಆ ಬರಹಗಾರ ಕೊನೆಯ ತನಕವೂ ಜೀವಂತಿಕೆಯಿಂದ ಬದುಕಿದ ಉದಾಹರಣೆ ಇಲ್ಲ.

ಆದರೆ ನಾಗತಿಹಳ್ಳಿ ಮಾತ್ರ ಈ ಎಲ್ಲಾ ಮಿತ್ ಗಳನ್ನು ಮೀರಿಬೆಳೆದ ವ್ಯಕ್ತಿ. ಇದಕ್ಕೆ ಮುಖ್ಯ ಕಾರಣವೆಂದರೆ ನಾಗತಿಹಳ್ಳಿ ಚಂದ್ರಶೇಖರ ಅವರ ಬದುಕು ಎಂದು ಹೇಳಬಹುದು. ಅವರೇ ಹಲವಾರು ಕಡೆ ಬರೆದುಕೊಂಡಂತೆ, ಹೇಳಿದಂತೆ ಅತ್ಯಂತ ಅನಾಕರ್ಷಕ ಹಿನ್ನೆಲೆಯಿಂದ ಬಂದ ಚಂದ್ರಶೇಖರ ಕಣ್ಣು ತೆರೆಯುತ್ತಲೆ ನೋವನ್ನು ಉಣ್ಣುತ್ತ , ಬದುಕನ್ನು ಅದು ಬಂದಂತೆ ಸ್ವೀಕರಿಸದೆ ಅದನ್ನೊಂದು ಸವಾಲಾಗಿ ಸ್ವೀಕರಿಸುತ್ತ, ತನ್ನ ಮನಸ್ಸಿನ ಸೂಕ್ಷ್ಮ ಸಂವೇದನೆಗಳಿಗೆ ಧ್ವನಿಯಾಗುತ್ತ ಬಂದರು.

ಅವರ ಅಂತರ್ಯದ ತುಡಿತ ಬರಹದ ಮೂಲಕ ಹೊರಬಂದು ನಾಗತಿಹಳ್ಳಿಯವರಿಗೊಂದು ವಿಶೇಷ ವ್ಯಕ್ತಿತ್ವ ಕಟ್ಟಿಕೊಟಿತು. ಯಾವಾಗ ಗಾಂಧಿನಗರದತ್ತ ಮುಖಮಾಡಿ ಉಂಡುಹೋದ ಕೊಂಡು ಹೋದ ಚಿತ್ರವನ್ನು ನಿರ್ದೇಶಿಸಿ ಪ್ರಕಟಿಸಿದರೋ , ಅಂದಿನಿಂದ ಇಂದಿನವರೆಗೂ ಅವರ ಪ್ರಯೋಗಗಳು ನಿಂತಿಲ್ಲ.ಗಾಂಧಿನಗರಿಗರ ಚಿತ್ರಗಳ ಚೌಕಟ್ಟನ್ನು ಮೀರಿದ ನಾಗತಿಹಳ್ಳಿಯವರ ಬದುಕಿನ ಅಭಿವ್ಯಕ್ತಿ ಇವರಿಗೊಂದು ವಿಶೇಷ ವ್ಯಕ್ತಿತ್ವ ತಂದುಕೊಟ್ಟಿದೆ.

ಒಟ್ಟಾರೆ ನಾಗತಿಹಳ್ಳಿಯವರ ಚಿತ್ರಗಳ ಹಾಡು – ದಾಟಿಗಳಿಂದ ಹಿಡಿದು ಚಿತ್ರದ ಕತೆ ಪಾತ್ರ, ಎಲ್ಲದರಲ್ಲಿಯೂ ಹೊಸತನ ತುಂಬಿ ತುಳುಕುತ್ತದೆ. ಇದಕ್ಕೆ ಮುಖ್ಯ ಕಾರಣ ನಾಗತಿಹಳ್ಳಿಯವರ ಒಳಗಡೆ ಇಂದಿಗೂ ಇರುವ ಚೈತನ್ಯದ ನೋಟ. ನಾಲ್ಕು ಕಾಸು ಕೈಗೆ

ಸಿಗುತ್ತಿರುವಂತೆ ತನ್ನ ಅಂತರಂಗದ ಸೂಕ್ಷ್ಮತೆಗಳನ್ನು ಕಳೆದುಕೊಂಡು ಶುಷ್ಕವಾಗುವ ಲೇಖಕನಂತೆ ಬರಿದಾಗಲಿಲ್ಲ. ನಿತ್ಯವೂ ಕೂತೂಹಲದಿಂದ ತನ್ನ ಸುತ್ತ ಮುತ್ತಲ ಪರಿಸರವನ್ನು ನೋಡುತ್ತ ಅವರೊಟ್ಟಿಗೆ ಕುಳಿತು ತನ್ನ ವ್ಯಕ್ತಿತ್ವ ಕಟ್ಟಿಕೊಳ್ಳುತ್ತಿದ್ದಾರೆ. ಹಾಗಂತಲೆ ಚಂದ್ರಶೇಖರ ದೇಶ ವಿದೇಶಗಳನ್ನು ಸುತ್ತಿ ಬಂದರೂ ತನ್ನ ಹುಟ್ಟೂರು ನಾಗತಿಹಳ್ಳಿಯನ್ನು ಹಾಗೂ ಅಲ್ಲಿಯ ಜನರನ್ನು ಮರೆತಿಲ್ಲ. ಅವರಿಗಾಗಿ ತನ್ನಿಂದ ಎಷ್ಟು ಸಾಧ್ಯವೊ ಅಷ್ಟು ಸಹಾಯ ಹಸ್ತವನ್ನು ಚಾಚುತ್ತ ಬಂದಿದ್ದಾಗಿದೆ.

ಇವರ ಮಾತಾಡ ಮಾತಾಡ ಮಲ್ಲಿಗೆ, ತೀರಾ ಇತ್ತೀಚಿನ ಒಲವೇ ಜೀವನ ಲೆಕ್ಕಾಚಾರ ಎಂಬ ಚಿತ್ರಗಳು ಸಮಾಜದ ನಿಜ ಸ್ಥಿತಿಯನ್ನು ಅನಾವರಣ ಮಾಡುತ್ತವೆ. ಚಿತ್ರಗಳ ಮೂಲಕ ಜನರಿಗೆ ಸಂತೋಷ ಹಂಚುತ್ತಲೆ ಅವರೊಳಗೆ ಚಿಂತನೆಯ ಹುಳುವನ್ನು ಬಿಡುವ ನಾಗತಿಹಳ್ಳಿ ನಮ್ಮ ನಡುವಿನ ಒಬ್ಬ ಅಪರೂಪದ ಚಿತ್ರ ನಿರ್ದೇಶಕ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

## ಮತ್ತೆ ಬಂದ ಮಳೆಯ ಗಣೇಶ



ನಡೆಯುವ ನಾಣ್ಯದ ಹಿಂದೆ ಬಾಜಿಕಟ್ಟಿ ಓಡಬಲ್ಲ ಗಾಂಧಿನಗರಿಗರು ಒಂದೆರಡೂ ವರ್ಷಗಳ ಹಿಂದೆ ಗಣೇಶನ ಹಿಂದೆ ದುಂಬಾಲು ಬಿದ್ದಿದ್ದೆ. ಬಿದ್ದಿದ್ದು. ಸ್ವತಃ ಗಣೇಶನ ತಲೆ ಕೂಡ ಆತನ ಭುಜದ ಮೇಲೆ ನಿಲ್ಲಲಿಲ್ಲ.

ಈಗ ಆ ಮುಂಗಾರು ಮಳೆಯ ಆರ್ಭಟ ಇಲ್ಲದೆ ಗಣೇಶ ತಣ್ಣಗಾಗಿದ್ದಾಗಿದೆ. ಈ ನಡುವೆ ತಂದೆ – ತಾಯಿಗಳನ್ನು ನಿರ್ಲಕ್ಷಿಸಿ ಸಹೋದರ – ಸಹೋದರಿಯರನ್ನು ದೂರವಿಟ್ಟು ಗಣೇಶ ಎಷ್ಟೆಲ್ಲ ಗಳಿಸಿದ್ದು ಯಾರಿಗಾಗಿಯೊ ? ಎಂಬ ಪ್ರಸಂಗಗಳೂ ನಡೆದು ಹೋದವು. ಇವೆಲ್ಲ ಗಣೇಶನ ನಿಜವಾದ ವ್ಯಕ್ತಿತ್ವಕ್ಕೆ ಕಪ್ಪು ಚುಕ್ಕೆಗಳಾದವು ಎಂದರೆ ಸುಳ್ಳಲ್ಲ.

ರೀಲ್ ಲೈಫನಲ್ಲಿ ತಮ್ಮ ಹೀರೋ ಎಂದು ಕಲ್ಪಿಸಿಕೊಂಡ ಗಣೇಶ ರೀಯಲ್ ಲೈಫನಲ್ಲಿ ಖಳನಾಯಕನಾದಾಗ ಸಹಜವಾಗಿಯೆ ಅನೇಕರಿಗೆ ಗಣೇಶನ ಬಗೆಗೆ ಬೇಜಾರಾಗಿತ್ತು. ಈಗ ಆ ಗಣೇಶ ಬದಲಾಗಿದ್ದಾನೆ. ತನ್ನ ತಂದೆ – ತಾಯಿಗಳ ಸಮ್ಮುಖದಲ್ಲಿಯೆ ತನ್ನ ಮಗುವಿನ ನಾಮಕರಣ ನಡೆಸಿದ್ದಾನೆ. ಚಿತ್ರರಂಗದ ದಿಗ್ಗಜರೆಲ್ಲ ಸೇರಿ ಹರಸಿ – ಹಾರೈಸಿದ್ದಾರೆ.

ಹಿಂದೆ ಗಣೇಶ ನಟಿಸಿದ ಸಿದ್ಧ ಸೂತ್ರಗಳಿಂದ ಹೊರತು ಪಡಿಸಿದ ಚಿತ್ರ ಕತೆ ಉಳ್ಳ ಡಿಫರೆಂಟ್ ಎಂಗ್ಯಲ್‌ನಲ್ಲಿ ಚಿತ್ರಿಕರಿಸಿರುವ ಮಳೆಯಲಿ ಜೊತೆಯಲಿ ಸಿದ್ಧವಾಗಿದೆಯಂತೆ. ಈ ಮಳೆಯಲ್ಲಿ ಗಣೇಶ ಮುಂಗಾರು ಮಳೆಯಲ್ಲಿಯಂತೆ ತೊಪ್ಪನೆ ತೋಯ್ದು ಹೋಗಿ ಪ್ರೇಕ್ಷರನ್ನೂ ತೋಯಿಸುತ್ತಾನೊ ? ಅಥವಾ ತಾನೊಬ್ಬನೆ ತೋಯ್ದು ಎಲ್ಲರ ನಗೆಪಾಟಲಿಗೆ ಗುರಿಯಾಗುತ್ತಾನೊ ಕಾದು ನೋಡಬೇಕು.

ಗಣೇಶ ಈ ಚಿತ್ರದಲ್ಲಿ ಗೆದ್ದರೆ ಮತ್ತೆ ನಾಲ್ಕು ಕಾಲ ಕನ್ನಡ ಚಿತ್ರರಂಗವನ್ನು ಆಳಬಲ್ಲ. ಇಲ್ಲದೆ ಹೋದರೆ ಉಳಿದ ಕಾಂಜಿಪಿಂಜಿಗಳಂತೆ ಆಗಾಗ ಕಾಣಿಸಿಕೊಳ್ಳಬಲ್ಲನಷ್ಟೆ.

## ಕವಡೆ ಕಾಯಿ

# ಮಾಯಾವತಿಗೆ ನಿಂದಿಸಿದರೆ ಡಿಬಾರ ! ಯಡ್ಡಿಗೆ ನಿಂದಿಸಿದರೆ



o ನಾರಾಯಣ ಎಂ.?ಕಲಬುರ್ಗಿ
ನಮ್ಮ ಯಡ್ಡಿಯ ಬುದ್ದಿಗೆ ಏಕೆ ಪುರೋಹಿತರ ಗ್ರಹಣ ಬಡಿದಿದೆ ?
**ಯಡ್ಡಿಯ ಜನ್ಮವಾಗಿರುವುದೇ ಪುರೋಹಿತರ ಭ್ರಷ್ಟ ಅಗ್ಗಿಷ್ಟಿಯಲ್ಲಿ, ಯಡ್ಡಿಗೆ ಗ್ರಹಣ ತಗುಲದೆ ಇನ್ನಾರಿಗೆ ತಗುಲುತ್ತದೆ**

o ಚಂದ್ರಕಾಂತ ಪಲ್ಲಾರಡ್ಡಿ ಬೀದರ
ಸ್ಟಾರ ಪ್ಲಸ್‌ನ ಸಚ್ಚಾ ಕಾ ಸಾಮ್ನಾ ಕಾರ್ಯಕ್ರಮವನ್ನು ಮನೆ ಮುರುಕ ಸಾಮ್ನಾ ಎಂದು ಕರೆದರೆ ?
**ಇದ್ದದ್ದನ್ನು ಹೇಳುವುದಕ್ಕಿಂತ ಕಳ್ಳ ಜೀವನ ನಡೆಸುವುದೆ ಲೇಸೆಂದು ಕರೆಯುತ್ತಿರಾ ?**

o ಬಸವರಾಜ ಎಂ. ಶಹಾಪುರ
ಸಪ್ತ ಭಜನೆ ಮಾದಿದರೆ, ದೇವರಿಗೆ ದಿಂಡಿರುಳು ಸೇವೆ ಸಲ್ಲಿಸಿದರೆ ಮಳೆ ಬರುತ್ತದೆಯೆ ?
**ಹಾಗೆ ಮಾಡಿದವರ ಮೈ ಬೆವರಿದ್ದು ಮಾತ್ರ ಖರೆ ಆಗುತ್ತದೆಂಬು ವಿನಃ ಮತ್ತೇನು ಆಗೋದಿಲ್ಲ ಎಂಬುದು ಈಗ ನಿಮಗೂ ಖಾತ್ರಿ ಆಗಿದೆಯಲ್ರೀ.... !**

o ನಾರಾಯಣಾಚಾರ್ಯ , ಸೇಡಂ
ನೀವು ಪದೇ ಪದೇ ಪುರೋಹಿತರ ಮೇಲೆ ಬರೆಯುತ್ತೀರಲ್ಲ ? ಏಕೆ ? ಅವರ ಮೇಲೆ ನಿಮಗೆ ಹಗೆಯೆ ?
**ಈ ದೇಶದ ಮನಸ್ಸುಗಳನ್ನು ನಾಶ ಮಾಡಿದವರೂ ಮಾಡುತ್ತೀರುವವರೂ ಮೂಲತಃ ಅವರೇ ಆದ್ದರಿಂದ ಮಾರಾಯ**

o ನಾಗವೇಣಿ ಯಾದಗಿರ
ನಮ್ಮೂರ ಗೋದಾಮಿನಲ್ಲಿ ಈಗ ಯಾವುದೇ ಸದ್ದು ಇಲ್ಲವಲ್ರೀ..... ?
**ಸದ್ದು ಮಾಡುವವರೆ ಸರಿದು ಹೋದಾಗ ಇನ್ನೆಂಥ ಸದ್ದು ಬರಲು ಸಾಧ್ಯ ?**

o ವೀಣಾಕುಲ್ಕರ್ಣಿ ರಾಯಚೂರು
ಇಲ್ಲೊಬ್ಬ ನಿನ್ನ ನೋಡಿದಾಗ , ಕಣ್ಣು ಕೂಡಿದಾಗ ಎಂದು ಹಾಡುತ್ತಿರಲು ಕಾರಣ?
**ಇದೆಲ್ಲ ಪ್ರೇಮರೋಗದ ಲಕ್ಷಣ !**

o ಶರಣಪ್ಪ ಮಾಚನೂರ ಯಾದಗಿರ
ಮಾಯಾವತಿಯನ್ನು ಉತ್ತರ ಪತ್ರಿಕೆಗಳಲ್ಲಿ ನಿಂದಿಸಿದ ವಿದ್ಯಾರ್ಥಿ ಡಿಬಾರ್ ಆದರೆ ಯಡ್ಡಿಯನ್ನು ನಿಂದಿಸಿದ ವಿದ್ಯಾರ್ಥಿಗೆ ?
**ಅನಂತಕುಮಾರ, ಯತ್ನಾಳ ಮುಂತಾದವರು ಬಹುಮಾನ ಕೊಡುತ್ತಾರಷ್ಟೆ !**

**೯೪೪೮೦೧೬೧೩೭ ಗೆ ಎಸ್.ಎಂ.ಎಸ್.ಮೂಲಕವೂ ಈ ಅಂಕಣಕ್ಕೆ ಪ್ರಶ್ನೆಗಳನ್ನು ಕಳಿಸಬಹುದು.**

# ಅಗ್ನಿ ಅಂಕುರ ಪ್ರಕಾಶನ

## ವೈಚಾರಿಕ ಸಾಹಿತ್ಯಕ್ಕೆ ತನ್ನದೆ ಕೊಡುಗೆ ನೀಡುವ ಪ್ರಕಾಶನದ ಪುಸ್ತಕಗಳು
















ಬಸವ ಮಾರ್ಗ, ಸಿ.ಬಿ. ಕಾಲೋನಿ

ಶಹಾಪುರ - ಕಲಬುರ್ಗಿ (ಜಿಲ್ಲೆ)

AGNI ANKUR Kannada Fortnightly Price Rs.10/-
July -2009 Rg.No.23/10/AI/Tc89/PMG/KA/NK/GLB/35/08-10

## ಗುಲ್ಬರ್ಗಾದಲ್ಲಿ ಶೈಕ್ಷಣಿಕ ಕ್ರಾಂತಿಯನ್ನು ಉಂಟು ಮಾಡುತ್ತಿರುವ



## ಡಾ.ಶರಣಬಸವಪ್ಪ ಅಪ್ಪ ಗುಲಬರ್ಗಾ ಅವರಿಗೆ ಅಭಿನಂದನೆಗಳು

PUBLISHER, PROPRIETOR & EDITOR : VISHWARADHYA SATYAMPET
Basavamarga, C. B. Colony SHAHAPUR - Dist :Gulbarga, Cell: 9480161315
Printed At : Grenobles Pvt.Ltd., Super Market Gulbarga
e-mail : satyampet2008@ymail.com